# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಜನವರಿ ೭, ೨೦೧೬ (ಪುಷ್ಯ ೧೭, ಶಕ ವರ್ಷ ೧೯೩೭)<br>Bengaluru, Thursday, January 7, 2016 (Pushya 17, Shaka Varsha 1937) | ಸಂಚಿಕೆ ೧<br>Issue 1 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ವಿಷಯ:** ಬಳ್ಳಾರಿ ಜಿಲ್ಲೆ, ಸಿರಗುಪ್ಪ ತಾಲ್ಲೂಕು, ಕೊಂಚಿಗೇರಿ ಗ್ರಾಮದ ಸ.ನಂ.1ರಲ್ಲಿ ವಿಸ್ತೀರ್ಣ 37 ಹೆಕ್ಟೇರ್ ಸಿ ಮತ್ತು ಡಿ ವರ್ಗದ ಜಮೀನನ್ನು ಎನ್.ಎಂ.ಡಿ.ಸಿ. ಲಿ., ದೋಣಿಮಲೈ ಇವರ ಪರವಾಗಿ ಪರಿಹಾರಾತ್ಮಕ ನೆಡುತೋಪು ಬೆಳೆಸಲು ಅರಣ್ಯ ಇಲಾಖೆಗೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ:** ಜಿಲ್ಲಾಧಿಕಾರಿ, ಬಳ್ಳಾರಿ ಜಿಲ್ಲೆ ಇವರ ಪತ್ರ ಸಂಖ್ಯೆ: ಕಂ.ಭೂಮಿ/ಸಿ&ಡಿ/250/2013–14, ದಿನಾಂಕ: 30.03.2015 ಮತ್ತು 30.04.2015.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿ, ಬಳ್ಳಾರಿ ಜಿಲ್ಲೆ ಇವರು ಬಳ್ಳಾರಿ ಜಿಲ್ಲೆ, ಸಿರಗುಪ್ಪ ತಾಲ್ಲೂಕು, ಕೊಂಚಿಗೇರಿ ಗ್ರಾಮದ ಸ.ನಂ.1ರಲ್ಲಿ ವಿಸ್ತೀರ್ಣ 37 ಹೆಕ್ಟೇರ್ ಸಿ ಮತ್ತು ಡಿ ವರ್ಗದ ಜಮೀನನ್ನು ಎನ್.ಎಂ.ಡಿ.ಸಿ. ಲಿ., ದೋಣಿಮಲೈ ಇವರ ಪರವಾಗಿ ಪರಿಹಾರಾತ್ಮಕ ನೆಡುತೋಪು ಬೆಳೆಸಲು ಅರಣ್ಯ ಇಲಾಖೆಗೆ ವರ್ಗಾಯಿಸುವ ಬಗ್ಗೆ ಪ್ರಸ್ತಾಪಿಸಿದ್ದಾರೆ.

ಮುಂದುವರೆದು ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕು, ದೋಣಿಮಲೈ ಗ್ರಾಮದಲ್ಲಿರುವ ಎನ್.ಎಂ.ಡಿ.ಸಿ ಲಿಮಿಟೆಡ್ ಇವರ ಪರವಾಗಿ ಸಂಸ್ಥೆಯ ಮೈನಿಂಗ್ ಲೀಜ್‌ನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಇಇ/17/ಎಫ್‌ಎಫ್‌ಎಂ/90 ದಿನಾಂಕ:28.07.1999ರಲ್ಲಿ ನವೀಕರಣ ಮಾಡಿದ್ದು, ಸದರಿ ಜಮೀನು ಅರಣ್ಯ ಜಮೀನಾಗಿರುವುದರಿಂದ ಅರಣ್ಯ ಜಮೀನಿಗೆ ಸಮಾನಾಂತರವಾಗಿ ಪರಿಹಾರಾತ್ಮಕವಾಗಿ ನೆಡುತೋಪು ಬೆಳೆಸಲು ಬಳ್ಳಾರಿ ಜಿಲ್ಲೆ, ಸಿರಗುಪ್ಪ ತಾಲ್ಲೂಕು, ಕೊಂಚಿಗೇರಿ ಗ್ರಾಮದ ಸ.ನಂ.1ರ ವಿಸ್ತೀರ್ಣ 37.00 ಹೆಕ್ಟೇರ್ ಜಮೀನನ್ನು ಅರಣ್ಯ ಇಲಾಖೆಗೆ ನಿಬಂಧನೆಗಳೊಂದಿಗೆ ವರ್ಗಾಯಿಸುವಂತೆ ಕೋರಿರುತ್ತಾರೆ.

ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 24 ಎಲ್‌ಜಿಇ 2015, ಬೆಂಗಳೂರು, ದಿನಾಂಕ: 17.08.2015.

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬಳ್ಳಾರಿ ಜಿಲ್ಲೆ, ಸಿರಗುಪ್ಪ ತಾಲ್ಲೂಕು, ಕೊಂಚಿಗೇರಿ ಗ್ರಾಮದ ಸ.ನಂ.1ರ ವಿಸ್ತೀರ್ಣ 37.00 ಹೆಕ್ಟೇರ್ ಸಿ ಮತ್ತು ಡಿ ವರ್ಗದ ಜಮೀನನ್ನು ಲ್ಯಾಂಡ್‌ಬ್ಯಾಂಕ್‌ನಿಂದ ಹಿಂಪಡೆದು ಎನ್.ಎಂ.ಡಿ.ಸಿ. ಲಿಮಿಟೆಡ್ ಇವರ ಪರವಾಗಿ ಪರಿಹಾರಾತ್ಮಕ ನೆಡುತೋಪು ಬೆಳೆಸಲು ಈ ಕೆಳಕಂಡ ಷರತ್ತುಗಳೊಂದಿಗೆ ಅರಣ್ಯ ಇಲಾಖೆಗೆ ವರ್ಗಾಯಿಸಲು ಸರ್ಕಾರದ ಮಂಜೂರಾತಿಯನ್ನು ನೀಡಿ ಆದೇಶಿಸಿದೆ.

**ಷರತ್ತುಗಳು:**

1) ವರ್ಗಾವಣೆಯಾದ ಜಮೀನನ್ನು ಸರ್ಕಾರದ ಸುತ್ತೋಲೆ ಸಂಖ್ಯೆ: ಆರ್‌ಡಿ.27,ಎಲ್‌ಜಿಪಿ.2011, ದಿನಾಂಕ: 06.04.2011ರ ಕಂಡಿಕೆ–6ರಂತೆ ಕ್ರಮವಹಿಸುವುದು.

2) ವರ್ಗಾವಣೆ ಪಡೆದ ಇಲಾಖೆಗೆ ವರ್ಗಾಯಿಸಿದ ಜಮೀನಿನ ಅವಶ್ಯಕತೆ ಇಲ್ಲದೇ ಇದ್ದಲ್ಲಿ ಮರಳಿ ಕಂದಾಯ ಇಲಾಖೆಗೆ ವಾಪಸ್ಸು ಮಾಡತಕ್ಕದ್ದು.

3) ವರ್ಗಾವಣೆಯಾದ ಜಮೀನನ್ನು ಅರಣ್ಯ ಇಲಾಖೆಯು ನೆಡುತೋಪು ಬೆಳೆಸುವ ಉದ್ದೇಶಕ್ಕಾಗಿ ಮಾತ್ರ ಉಪಯೋಗಿಸತಕ್ಕದ್ದು.

4) ಪ್ರಸ್ತಾಪಿತ ಜಮೀನಿನಲ್ಲಿ ಜಾನುವಾರುಗಳು ಮೇಯುವಿಕೆಗೆ ಅವಕಾಶ ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮಹಾಂತೇಗೌಡ ಎಸ್.ಎಲ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ. (ಭೂ ಮಂಜೂರಾತಿ–3)

PR. 592

SC. 25

## ಕಂದಾಯ ಸಚಿವಾಲಯ

**ವಿಷಯ:** 2015–16ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿರುವಂತೆ ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯಲ್ಲಿ ಹೊಸ ಯೋಜನೆಯಾದ "**ಪೋಡಿ ಕಡತ ಮುಕ್ತ ಗ್ರಾಮ ಯೋಜನೆ**" ಬಗ್ಗೆ.

**ಓದಲಾಗಿದೆ:** 1. ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ ಇವರ ಪತ್ರ ಸಂಖ್ಯೆ: SSLR/TNL/MIS/MIS–182/2014–15 ದಿನಾಂಕ 29.05.2015.

2. 2015–16ನೇ ಸಾಲಿನ ಆಯವ್ಯಯ ಘೋಷಣೆಯ ಕಂಡಿಕೆ ಸಂಖ್ಯೆ: 371.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: 1 ರಲ್ಲಿ ಓದಲಾದ ಪತ್ರದಲ್ಲಿ, 2015–16ನೇ ಸಾಲಿನ ಆರ್ಥಿಕ ವರ್ಷದಲ್ಲಿ ಭೂಮಾಪನ ಇಲಾಖೆಯಲ್ಲಿ ಕೈಗೊಳ್ಳಬಹುದಾದ ಹೊಸ ಯೋಜನೆಗಳ ಬಗ್ಗೆ–ಪೋಡಿ ಮುಕ್ತ ಗ್ರಾಮ ಯೋಜನೆಗೆ ಸಂಬಂಧಿಸಿದ ಪ್ರಸ್ತಾವನೆಯನ್ನು ಸಲ್ಲಿಸಿದ್ದು, ರಾಜ್ಯದಲ್ಲಿ ಒಟ್ಟು 30,662 ಗ್ರಾಮಗಳಿದ್ದು (ಬೇಚರಾಕ್ ಗ್ರಾಮಗಳನ್ನೊಳಗೊಂಡಂತೆ), 3,18,78,750 ಸಂಖ್ಯೆಯ ಹಿಡುವಳಿದಾರರಿರುತ್ತಾರೆ. ರಾಜ್ಯದಲ್ಲಿ ಒಟ್ಟು 1,46,28,002 ಸಂಖ್ಯೆಯ ಸರ್ವೆ ನಂಬರುಗಳಿರುತ್ತವೆ. ಭೂಮಿ ಮಾಹಿತಿ ಕೋಶದಿಂದ ಪಡೆದ ಮಾಹಿತಿಯಂತೆ ರಾಜ್ಯದಲ್ಲಿ ಒಟ್ಟು 33,42,765 ಸಂಖ್ಯೆ ಬಹುಮಾಲೀಕತ್ವ ಹೊಂದಿರುವ ಪಹಣಿಗಳಿರುತ್ತವೆ. ಬಹುಮಾಲೀಕತ್ವದ ಪಹಣಿಗಳನ್ನು ಪೋಡಿ ಪ್ರಕ್ರಿಯೆಗೆ ಒಳಪಡಿಸಿ ಏಕಮಾಲೀಕತ್ವದ ಹಕ್ಕುದಾಖಲೆಗಳನ್ನು ಸಿದ್ಧಪಡಿಸಿದಲ್ಲಿ ಭೂವ್ಯಾಜ್ಯಗಳು ಗಣನೀಯವಾಗಿ ಕಡಿಮೆಯಾಗುತ್ತವೆ. ರಾಜ್ಯದಲ್ಲಿ 1,37,895 ಸಂಖ್ಯೆ ಗಡಿ ನಿಗಧಿಪಡಿಸಲು ಕೋರಿ ಸಲ್ಲಿಸಿರುವ ಅರ್ಜಿಗಳು ಅಳತೆಗೆ ಬಾಕಿ ಇರುತ್ತವೆ. ಇದಲ್ಲದೇ ಸಾವಿರಾರು ಸಂಖ್ಯೆಯಲ್ಲಿ ಭೂಸ್ವಾಧೀನ ಪ್ರಕರಣಗಳು, ಭೂಪರಿವರ್ತನೆ ಪ್ರಕರಣಗಳು, ಭೂಸುಧಾರಣೆ ಪ್ರಕರಣಗಳು ಅಳತೆಗೆ ಬಾಕಿ ಇರುತ್ತವೆ. ಈ ಎಲ್ಲಾ ಹಿನ್ನೆಲೆಯಲ್ಲಿ ಒಂದು ಗ್ರಾಮದ ಬಹುಮಾಲೀಕತ್ವದ ಪಹಣಿಗಳನ್ನು ಮತ್ತು ಹಲವಾರು ವರ್ಷಗಳಿಂದ ಬಾಕಿ ಇರುವ ಕಡತಗಳನ್ನು ಶೂನ್ಯಗೊಳಿಸುವ ಮಹತ್ವಾಕಾಂಕ್ಷೆಯೊಂದಿಗೆ ಪೋಡಿ ಮುಕ್ತ ಗ್ರಾಮ ಯೋಜನೆಯನ್ನು ರಾಜ್ಯದಲ್ಲಿ ಹಂತ ಹಂತವಾಗಿ ಜಾರಿಗೆ ತರುವ ಉದ್ದೇಶದಿಂದ, 2015–16ನೇ ಸಾಲಿನಿಂದ ಹಂತ ಹಂತವಾಗಿ ಪ್ರತಿ ಗ್ರಾಮವನ್ನು ಆಯ್ಕೆ ಮಾಡಿಕೊಂಡು ಪೋಡಿರಹಿತ ಗ್ರಾಮವನ್ನಾಗಿ ಘೋಷಿಸಲು ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ.

ಪೋಡಿ ಮುಕ್ತ ಗ್ರಾಮ ಯೋಜನೆಯಡಿಯಲ್ಲಿ ಇಲಾಖೆಯ ದೈನಂದಿನ ಕೆಲಸಗಳ ಜೊತೆಯಲ್ಲಿ, ಈ ಯೋಜನೆಗೆ ವಿಶೇಷ ಮಹತ್ವ ನೀಡಿ ಪ್ರತಿ ತಿಂಗಳಿಗೆ ಒಂದು ತಾಲ್ಲೂಕಿನಲ್ಲಿ ಒಂದು ಗ್ರಾಮವನ್ನು ಆಯ್ಕೆ ಮಾಡಿಕೊಂಡು ಆ ಗ್ರಾಮದ ಯಾವುದೇ ರೀತಿಯ ಅಳತೆ ಪ್ರಕರಣಗಳಿದ್ದರೂ (ದರಖಾಸ್ತು ಪೋಡಿ ಕಡತಗಳನ್ನು ಹೊರತುಪಡಿಸಿ) ಅವುಗಳನ್ನು ವಿಲೇಗೊಳಿಸಿ, ಆ ಗ್ರಾಮದಲ್ಲಿ ಯಾವುದೇ ರೈತರ ಅಳತೆ ಕೆಲಸ ಬಾಕಿ ಇಲ್ಲದಂತೆ ಪೂರ್ಣಗೊಳಿಸಿ 2015–16 ನೇ ಸಾಲಿಗೆ 1250 ಗ್ರಾಮಗಳನ್ನು ಆಯ್ಕೆ ಮಾಡಿಕೊಂಡು ಗ್ರಾಮದಲ್ಲಿ ಭೂಮಾಪನ ಇಲಾಖೆಯ ಅಧಿಕಾರಿ ಮತ್ತು ಸಿಬ್ಬಂದಿಗಳು ವಾಸ್ತವ್ಯ ಹೂಡಿ ಅಳತೆ ಕೆಲಸ ಮತ್ತು ದಾಖಲೆಗಳನ್ನು ಅಂತಿಮಗೊಳಿಸುವ ಕೆಲಸ ಪೂರ್ಣಗೊಳಿಸಿದ ನಂತರ ಮತ್ತೊಂದು ಗ್ರಾಮಕ್ಕೆ ಯೋಜನೆಯನ್ನು ವಿಸ್ತರಿಸಲಾಗುವುದು. ಆಯ್ಕೆ ಮಾಡಲಾದ ಗ್ರಾಮದ ಪೋಡಿ ಪ್ರಕರಣಗಳು ಅಂದರೆ ಮ್ಯುಟೇಶನ್ ಪೋಡಿ, ಮ್ಯುಟೇಶನ್ ಪೂರ್ವ ನಕ್ಷೆ (11ಇ) ಭೂ ಪರಿವರ್ತನೆ ಪೋಡಿ, ಭೂಸ್ವಾಧೀನ ಪೋಡಿ ಹಾಗೂ ಗಡಿ ವಿವಾದ ಇತ್ಯರ್ಥಪಡಿಸುವ ಹದ್ದುಬಸ್ತು ಪ್ರಕರಣಗಳ ಅಳತೆ ಕೆಲಸ ನಿರ್ವಹಿಸಿ ಯಾವುದೇ ಪ್ರಕರಣಗಳು ಬಾಕಿ ಇಲ್ಲವೆಂದು ದೃಢಪಡಿಸಿಕೊಂಡ ನಂತರ

"**ಪೋಡಿ ಕಡತ ಮುಕ್ತ ಗ್ರಾಮ**" ಎಂದು ಘೋಷಿಸಿ ಹೊಸ ನಕ್ಷೆಗಳನ್ನು ಮತ್ತು ಪಹಣಿಗಳನ್ನು ವಿತರಿಸಿ ಮತ್ತೊಂದು ಗ್ರಾಮವನ್ನು ಈ ಕಾರ್ಯಕ್ರಮದಲ್ಲಿ ಅಳವಡಿಸಿಕೊಳ್ಳಲಾಗುವುದು. ಪೋಡಿ ಕಡತ ಮುಕ್ತ ಗ್ರಾಮ ಯೋಜನೆಯ ಪ್ರಯೋಜನಗಳು ಈ ರೀತಿಯಾಗಿವೆ:–

1) ಹತ್ತಾರು ವರ್ಷಗಳಿಂದ ಬಾಕಿ ಇರುವ ಪೋಡಿ ಕಡತಗಳ ವಿಲೇವಾರಿ

2) ದೋಷಮುಕ್ತ ಭೂದಾಖಲೆಗಳ ನಿರ್ಮಾಣ

3) ಏಕಮಾಲೀಕತ್ವದ ಪಹಣಿ ಮತ್ತು ನಕ್ಷೆಗಳ ವಿತರಣೆ

4) ಭೂ ಸಂಬಂಧಿತ ಆಂತರಿಕ ಕಲಹ ಮುಕ್ತ ಕುಟುಂಬ

5) ಭೂ ಸಂಬಂಧಿತ ವ್ಯಾಜ್ಯ ಮುಕ್ತ ಗ್ರಾಮಗಳ ನಿರ್ಮಾಣ

6) ರೈತರು/ಸಾರ್ವಜನಿಕರು ಕಛೇರಿಗಳಿಗೆ ಅಲೆಯುವುದನ್ನು ನಿವಾರಿಸುವುದು

ಪೋಡಿ ಕಡತ ಮುಕ್ತ ಗ್ರಾಮ ಯೋಜನೆಗೆ ಈ ಕೆಳಕಂಡ ಮೂಲಭೂತ ಸೌಕರ್ಯಗಳು ಅವಶ್ಯಕವಾಗಿರುತ್ತದೆ.

1) ಕಛೇರಿ ಸ್ಥಳಾವಕಾಶ

2) ಅಗತ್ಯ ಪೀಠೋಪಕರಣ

3) ಭದ್ರತೆ ಮತ್ತು ಸುರಕ್ಷತೆ

4) ಗಣಕಯಂತ್ರ & ಪ್ರಿಂಟರ್, ಲೇಖನ ಸಾಮಗ್ರಿಗಳು ಇತರೆ

5) ಸರ್ವೆ ಉಪಕರಣಗಳು

6) ವಾಹನ ಸೌಕರ್ಯ

7) ಅಗತ್ಯ ಸಂಖ್ಯೆಯ ಸಹಾಯಕರು

8) ಸಿಬ್ಬಂದಿಗಳಿಗೆ ಊಟ ವಸತಿ ಇತರೆ ಸಲುವಾಗಿ ವಿಶೇಷ ಭತ್ಯೆ

ಪೋಡಿ ಕಡತ ಮುಕ್ತ ಗ್ರಾಮ ಯೋಜನೆಗೆ 2015–16ನೇ ಸಾಲಿಗೆ ಲೇಖನಸಾಮಗ್ರಿಗಳ ಹಾಗೂ ಇತರೆ ವಿಷಯಗಳಿಗಾಗಿ : ₹. 50,000.00 ದಂತೆ ಒಟ್ಟು 1250 ಗ್ರಾಮಗಳಿಗೆ ₹.6,25,00,000–00 (ಆರು ಕೋಟಿ ಇಪ್ಪತ್ತೈದು ಲಕ್ಷ ರೂಪಾಯಿಗಳು ಮಾತ್ರ) ಅನುದಾನ ಅವಶ್ಯಕತೆ ಇರುತ್ತದೆಯೆಂದು ಸರ್ಕಾರಕ್ಕೆ ಸಲ್ಲಿಸಿದ ಪ್ರಸ್ತಾವನೆಯಲ್ಲಿ ತಿಳಿಸಲಾಗಿದೆ. ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 153 ಭೂದಾಸ 2015, ಬೆಂಗಳೂರು, ದಿನಾಂಕ: 09.09.2015.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ 2015–16ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿರುವಂತೆ ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯಲ್ಲಿ ಹೊಸ ಯೋಜನೆಯಾದ "**ಪೋಡಿ ಕಡತ ಮುಕ್ತ ಗ್ರಾಮ ಯೋಜನೆ**" ಬಗ್ಗೆ ಅಗತ್ಯವಿರುವ ಅನುದಾನವನ್ನು "**ಭೂಮಿ ಬಳಕೆದಾರರ ನಿಧಿ**" **(Bhoomi user charges) ಯಿಂದ** ಹಾಗೂ ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯಲ್ಲಿ ಲಭ್ಯವಿರುವ ಮಾನವ ಸಂಪನ್ಮೂಲ ಹಾಗೂ ಕಛೇರಿಯಲ್ಲಿ ಲಭ್ಯವಿರುವ ಕಂಪ್ಯೂಟರ್ ಹಾಗೂ ತಂತ್ರಾಂಶ ಹಾಗೂ ಇತರೆ ಅಳತೆ ಉಪಕರಣಗಳನ್ನು ಪೂರ್ಣವಾಗಿ ಬಳಸಿಕೊಂಡು ಈ ಯೋಜನೆಯನ್ನು ಅನುಷ್ಠಾನಕ್ಕೆ ತರಲು ಕ್ರಮವಹಿಸಲು ಆದೇಶಿಸಿದೆ ಹಾಗೂ ಅನುದಾನ ಲಭ್ಯತೆ ಕಡಿಮೆ ಇದ್ದಲ್ಲಿ, ಅನುದಾನ ಒದಗಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಸೂಚಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 595 ವೆಚ್ಚ–7/2015, ದಿನಾಂಕ 30.06.2015 ಮತ್ತು ಪರಿಯೋಜನಾ ರಚನಾ ವಿಭಾಗ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ ರವರ ಟಿಪ್ಪಣಿ ಸಂಖ್ಯೆ: ಪಿಡಿ 43 ಪಿಎಫ್ಒ 2015, ದಿನಾಂಕ 17.08.2015ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ನಿರಂಜನ ಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)

ಕಂದಾಯ ಇಲಾಖೆ. (ಭೂಮಾಪನ)

**PR. 581**

**SC. 100**

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು, ಲೋಕೋಪಯೋಗಿ ಇಲಾಖೆ ಕಲಬುರಗಿ ನೂತನ ವಲಯ ಕಛೇರಿಯನ್ನು ಹುದ್ದೆ ಹಾಗೂ ಪೂರಕ ಸಿಬ್ಬಂದಿಯೊಂದಿಗೆ ಸೃಜಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ ಇವರ ಪತ್ರ ಸಂಖ್ಯೆ: ಸಿಬಿಎನ್/ಸಿ–3/ಮುಇಂಕಗು/ಸೃಜಿಸುವ/ 2014–15/00843, ದಿನಾಂಕ: 16–04–2015.

**ಪ್ರಸ್ತಾವನೆ :**

ಮೇಲೆ ಓದಲಾದ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ ಇವರ ಪತ್ರದಲ್ಲಿ ಹೈದ್ರಾಬಾದ್–ಕರ್ನಾಟಕ ಭಾಗದಲ್ಲಿ ಬರುವ 6 ಜಿಲ್ಲೆಗಳಲ್ಲಿ ಸರ್ಕಾರದ ನಾನಾ ಯೋಜನೆಯಡಿ ಕಾಮಗಾರಿಗಳನ್ನು ತೆಗೆದುಕೊಳ್ಳುತ್ತಿದ್ದು, ಸದರಿ ಕಾಮಗಾರಿಗಳನ್ನು ಹಾಗೂ ಹೈದ್ರಾಬಾದ್–ಕರ್ನಾಟಕ ಪ್ರಾದೇಶಿಕ ಅಭಿವೃದ್ಧಿ ಮಂಡಳಿಯಿಂದ ತೆಗೆದುಕೊಳ್ಳಬೇಕಾಗುವ ಹಲವಾರು ಅಭಿವೃದ್ಧಿ ಕಾಮಗಾರಿಗಳಿಗೆ ಆಡಳಿತಾತ್ಮಕ ಹಾಗೂ ತಾಂತ್ರಿಕ ಅನುಮೋದನೆಯನ್ನು ಪಡೆದು ಶೀಘ್ರವಾಗಿ ಅಭಿವೃದ್ಧಿ ಕಾರ್ಯಗಳನ್ನು ಹಮ್ಮಿಕೊಳ್ಳುವುದು ಅವಶ್ಯಕವಿರುವುದರಿಂದ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು, ಲೋಕೋಪಯೋಗಿ ಇಲಾಖೆ, ಕಲಬುರಗಿ ವಲಯ ಕಛೇರಿಯನ್ನು ಹೊಸದಾಗಿ ಸೃಜಿಸುವಂತೆ ಹಾಗೂ ಈಗ ಇರುವ ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಹಾಗೂ ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ ವ್ಯಾಪ್ತಿಗೆ ಒಳಪಡುವ ವೃತ್ತ ಕಛೇರಿ : ವಿಭಾಗ ಹಾಗೂ ಉಪ ವಿಭಾಗಗಳ ಕಛೇರಿ ಮತ್ತು ಕಾರ್ಯಭಾರವನ್ನು ಮೂರು ವಲಯ ಕಛೇರಿಗಳಿಗೆ ಸಮನಾಗಿ ಪುನರ್ ವಿಂಗಡಿಸುವಂತೆ ಕೋರಿರುತ್ತಾರೆ. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ ರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿರುತ್ತದೆ.

ಲೋಕೋಪಯೋಗಿ ವೃತ್ತ, ಕಲಬುರಗಿ ವ್ಯಾಪ್ತಿಯಲ್ಲಿ ಬರುವ ಅಭಿವೃದ್ಧಿ ಕಾಮಗಾರಿಗಳ ಅನುಷ್ಠಾನದಲ್ಲಿ ತಾಂತ್ರಿಕ / ಆಡಳಿತಾತ್ಮಕ ಅನುಮೋದನೆಯನ್ನು ಶೀಘ್ರಗೊಳಿಸುವ ಹಾಗೂ ಕಾಮಗಾರಿಗಳನ್ನು ಸುಗಮವಾಗಿ ಅನುಷ್ಠಾನಗೊಳಿಸುವ ಹಿತದೃಷ್ಠಿಯಿಂದ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು, ಲೋಕೋಪಯೋಗಿ ಇಲಾಖೆ, ಕಲಬುರಗಿ ಇಲ್ಲಿ ನೂತನವಾಗಿ ವಲಯ ಕಛೇರಿಯನ್ನು ಪ್ರಾರಂಭಿಸಲು ಉದ್ದೇಶಿಸಲಾಗಿದ್ದು, ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 702 ಸೇಸಎ 2014,ಬೆಂಗಳೂರು, ದಿನಾಂಕ: 02–11–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಲೋಕೋಪಯೋಗಿ ವೃತ್ತ, ಕಲಬುರಗಿ ವ್ಯಾಪ್ತಿಯಲ್ಲಿ ಬರುವ ಅಭಿವೃದ್ಧಿ ಕಾಮಗಾರಿಗಳ ಅನುಷ್ಠಾನದಲ್ಲಿ ತಾಂತ್ರಿಕ / ಆಡಳಿತಾತ್ಮಕ ಅನುಮೋದನೆಯನ್ನು ಶೀಘ್ರಗೊಳಿಸುವ ಹಾಗೂ ಕಾಮಗಾರಿಗಳನ್ನು ಸುಗಮವಾಗಿ ಅನುಷ್ಠಾನಗೊಳಿಸುವ ಹಿತದೃಷ್ಠಿಯಿಂದ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು, ಲೋಕೋಪಯೋಗಿ ಇಲಾಖೆ, ಕಲಬುರಗಿ ಇಲ್ಲಿ ನೂತನವಾಗಿ ವಲಯ ಕಛೇರಿಯನ್ನು ಈ ಕೆಳಕಂಡ ವಿವಿಧ ವೃಂದದ ಒಟ್ಟು 69 ಹುದ್ದೆಗಳನ್ನು ಮಂಜೂರು ಮಾಡಿ ಕಾರ್ಯನಿರ್ವಹಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

| Sl.No | Post | Dharwad | | | Kalaburagi | | Total |
|---|---|---|---|---|---|---|---|
| | | Existing Posts | To be shifted to Kalaburagi CE | Balance retained in Dharwad | Posts to be shifted from Dharwad | New creations | |
| 1. | Chief Engineer | 01 | - | 01 | - | 01 | 01 |
| 2. | Superintend Engineer (Design) | 01 | - | 01 | - | 01 | 01 |
| 3. | Deputy Chief Engineer (Executive Engineer) | 04 | 01 | 03 | 01 | 01 | 02 |
| 4. | Executive Engineer (Electrical) | - | - | - | - | 01 | 01 |
| 5. | Chief Legal Adviser | 02 | 01 | 01 | 01 | - | 01 |
| 6. | Technical Assistant | 05 | 02 | 03 | 02 | 01 | 03 |
| 7. | Assistant Executive Engineer (Traffic) | 01 | - | 01 | - | 01 | 01 |
| 8. | Deputy Director (Statistics) /AD (Statistics) | 02 | 01 | 01 | 01 | - | 01 |
| 9. | Deputy Director (Horti) | 01 | - | 01 | - | - | - |
| 10. | Accounts Officer | 01 | - | 01 | - | 01 | 01 |
| 11. | Audit Officer | 01 | - | 01 | - | 01 | 01 |
| 12. | Registrar | 01 | - | 01 | - | 01 | 01 |
| 13. | Assistant Engineer | 20 | 10 | 10 | 10 | - | 10 |
| 14. | Assistant Engineer (Traffic Cell) | 00 | - | 00 | - | 01 | 01 |
| 15. | Superintendent | 02 | 01 | 01 | 01 | - | 01 |
| 16. | Junior Engineer | 08 | 04 | 04 | 04 | - | 04 |
| 17. | Draft Officer | 01 | - | 01 | - | 01 | 01 |
| 18. | Legal cell Sherastidar | 01 | - | 01 | - | - | - |
| 19. | Legal cell FDA | - | - | - | - | 01 | 01 |
| 20. | FDA | 11 | 05 | 06 | 05 | 01 | 06 |
| 21. | SDA | 14 | 07 | 07 | 07 | - | 07 |
| 22. | Stenographers* | 03 | 01 | 02 | 01 | 01 | 02 |
| 23. | Typists* | 04 | 02 | 02 | 02 | - | 02 |
| 24. | DEO/Computer Operator* | 04 | 02 | 02 | 02 | - | 02 |
| 25. | Revenue Inspector | 01 | - | 01 | - | 01 | 01 |
| 26. | Assistant Statistical Officers | 02 | 01 | 01 | 01 | - | 01 |
| 27. | Statistical Inspector | 01 | - | 01 | - | 01 | 01 |
| 28. | First Division Surveyor | 01 | - | 01 | - | 01 | 01 |
| 29. | Driver* | 01 | - | 01 | - | 04 | 04 (on outsourcing) |
| 30. | Attender/ Sepoy/ Cycle orderly/ sweeper/ watchman* | 22 | 10 | 12 | 10 | - | 10 (on Outsourcing if posts are vacant) |
| | **Total** | **116** | **48** | **68** | **48** | **21** | **69** |

ಲೋಕೋಪಯೋಗಿ ವೃತ್ತ, ಕಲಬುರಗಿ ವ್ಯಾಪ್ತಿಯಲ್ಲಿ ಬರುವ 1)ಲೋಕೋಪಯೋಗಿ ವಿಭಾಗ, ಕಲಬುರಗಿ, 2)ಲೋಕೋಪಯೋಗಿ ವಿಭಾಗ, ಯಾದಗಿರಿ, 3) ಲೋಕೋಪಯೋಗಿ ವಿಭಾಗ, ಬೀದರ್ ಮತ್ತು 4)ಲೋಕೋಪಯೋಗಿ ವಿಭಾಗ, ಸೇಡಂ ವಿಭಾಗಗಳು ನೂತನವಾಗಿ ರಚಿಸಲಾಗುತ್ತಿರುವ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು, ಲೋಕೋಪಯೋಗಿ ಇಲಾಖೆ, ಕಲಬುರಗಿ ವಲಯದ ವ್ಯಾಪ್ತಿಯಲ್ಲಿ ಬರುತ್ತವೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ ವಲಯ ವ್ಯಾಪ್ತಿಯಿಂದ ಮರು ವಿನ್ಯಾಸಗೊಳಿಸಲು ಉದ್ದೇಶಿಸಿರುವ 48 ಹುದ್ದೆಗಳನ್ನು ಹೊಸದಾಗಿ ಸೃಜಿಸಲಾದ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು, ಲೋಕೋಪಯೋಗಿ ಇಲಾಖೆ, ಕಲಬುರಗಿ ವಲಯಕ್ಕೆ ಮರು ವಿನ್ಯಾಸಗೊಳಿಸಲು ಕೂಡಲೇ ಅಗತ್ಯ ಕ್ರಮ ವಹಿಸುವುದು.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು, ಲೋಕೋಪಯೋಗಿ ಇಲಾಖೆ, ಕಲಬುರಗಿ ಇಲ್ಲಿನ ನೂತನ ಕಛೇರಿಗೆ ಮಂಜೂರು ಮಾಡಲಾಗಿರುವ 69 ಹುದ್ದೆಗಳ ಪೈಕಿ, ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು, (ಉತ್ತರ), ಧಾರವಾಡ ವಲಯ ಕಛೇರಿಯಿಂದ ಮರು ವಿನ್ಯಾಸಗೊಳಿಸಲು ಉದ್ದೇಶಿಸಲಾಗಿರುವ ಶೀಘ್ರಲಿಪಿಗಾರರು, ಬೆರಳಚ್ಚುಗಾರರು, ಡೇಟಾ ಎಂಟ್ರಿ ಆಪರೇಟರ್ ಕಂ ಬೆರಳಚ್ಚುಗಾರರು, ಚಾಲಕರು ಹಾಗೂ ಅಟೆಂಡರ್/ಸಿಪಾಯಿ/ ಸೈಕಲ್ ಅರ್ಡರ್ಲಿ / ಸ್ವೀಪರ್ / ವಾಚ್‌ಮನ್ ವೃಂದದ ಹುದ್ದೆಗಳನ್ನು ವರ್ಗಾವಣೆ ಮೂಲಕ ಮರು ವಿನ್ಯಾಸಗೊಳಿಸಲು ಸಾಧ್ಯವಿಲ್ಲದಿದ್ದ ಪಕ್ಷದಲ್ಲಿ, ಬಾಹ್ಯಮೂಲದ ಮುಖಾಂತರ ಭರ್ತಿ ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ. ಎಫ್‌ಡಿ 332 ಎಫ್‌ಸಿ–2/2015, ದಿನಾಂಕ 07–10–2015ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಮರಿಯಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ

(ಸೇವೆಗಳು–ಎ)

PR. 676

SC. 250

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ವೈದ್ಯಕೀಯ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಸರ್ಕಾರಿ ಸ್ವಾಯತ್ತ ಸಂಸ್ಥೆಗಳಲ್ಲಿನ ಖಾಯಂ ಸೀನಿಯರ್ ರೆಸಿಡೆಂಟ್ ಹುದ್ದೆಗಳನ್ನು ಖಾಯಂ ಟ್ಯೂಟರ್ ಹುದ್ದೆಗಳನ್ನಾಗಿ ಮರುಪದನಾಮೀಕರಿಸಿರುವುದನ್ನು ರದ್ದುಪಡಿಸಿ, ಖಾಯಂ ಸೀನಿಯರ್ ರೆಸಿಡೆಂಟ್ ಹುದ್ದೆಗೆ ದಿನಾಂಕ 16.12.2011 ರ ಆದೇಶದನ್ವಯ ನಿಗಧಿಪಡಿಸಲಾಗಿದ್ದ 2006 ರ ಪರಿಷ್ಕೃತ ಎಐಸಿಟಿಇ ವೇತನ ಶ್ರೇಣಿಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಆಕುಕ 4 ಎಂಎಂಸಿ 2010, ದಿನಾಂಕ 16.12.2011.
2. ಸರ್ಕಾರದ ಆದೇಶ ಸಂಖ್ಯೆ: ಆಕುಕ 320 ಎಂಎಂಸಿ 2011, ದಿನಾಂಕ 16.10.2012.
3. ರಿಟ್ ಅರ್ಜಿ ಸಂಖ್ಯೆ:86435–465/2012 (S-RES) ರಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ 16.04.2013 ರಂದು ನೀಡಿರುವ ತೀರ್ಪು.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ವೈದ್ಯಕೀಯ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಸರ್ಕಾರಿ ಸ್ವಾಯತ್ತ ಸಂಸ್ಥೆಗಳಲ್ಲಿನ ಬೋಧಕ ವರ್ಗದವರಿಗೆ ದಿನಾಂಕ 01.04.2011 ರಿಂದ ಅನ್ವಯವಾಗುವಂತೆ 2006 ರ ಅಖಿಲ ಭಾರತ ತಾಂತ್ರಿಕ ಶಿಕ್ಷಣ ಪರಿಷತ್ತಿನ (AICTE) ಪರಿಷ್ಕೃತ ವೇತನ ಶ್ರೇಣಿಗಳನ್ನು ವಿಸ್ತರಿಸಿ ಆದೇಶಿಸಿದೆ.

ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಸರ್ಕಾರದ ಆದೇಶ ಸಂಖ್ಯೆ:ಆಕುಕ 4 ಎಂಎಂಸಿ 2010, ದಿನಾಂಕ 16.12.2011 ರಲ್ಲಿನ ಆದೇಶ ಭಾಗವನ್ನು ಮಾರ್ಪಡಿಸಿ, ಸರ್ಕಾರಿ ಸ್ವಾಯತ್ತ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಖಾಯಂ ಸೀನಿಯರ್ ರೆಸಿಡೆಂಟ್ಸ್‌ಗಳನ್ನು ಖಾಯಂ ಟ್ಯೂಟರ್ ಹುದ್ದೆಗಳೆಂದು ಪದನಾಮೀಕರಿಸಿ, ಈ ಹುದ್ದೆಗೆ 2006 ರ ಅಖಿಲ ಭಾರತ ತಾಂತ್ರಿಕ ಶಿಕ್ಷಣ ಪರಿಷತ್ತಿನ (AICTE) ಪರಿಷ್ಕೃತ ವೇತನ ಶ್ರೇಣಿ ₹. 15600–39100 + ಎಜಿಪಿ ₹. 2000/– ಗಳನ್ನು ದಿನಾಂಕ 01.04.2011 ರಿಂದ ಅನ್ವಯವಾಗುವಂತೆ ನಿಗಧಿಪಡಿಸಿ ಆದೇಶಿಸಲಾಗಿದೆ.

ಬೀದರ್ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯ ಸೀನಿಯರ್ ರೆಸಿಡೆಂಟ್ಸ್‌ಗಳು ತಮ್ಮ ಗಮನಕ್ಕೆ ತರದೇ ದಿನಾಂಕ 16.12.2011 ರ ಆದೇಶದಲ್ಲಿ ನಿಗಧಿಪಡಿಸಿರುವ ಅಕಾಡೆಮಿಕ್ ಗ್ರೇಡ್ ಪೇಯನ್ನು ₹.6000/–ಗಳಿಂದ ರೂ.2000/– ಗಳಿಗೆ ಕಡಿಮೆಗೊಳಿಸಿರುವುದು ಹಾಗೂ ವೇತನವನ್ನು ಕಡಿಮೆಗೊಳಿಸುವ ಮುನ್ನ ತಮ್ಮ ಹೇಳಿಕೆ ನೀಡಲು ಯಾವುದೇ ಅವಕಾಶ ನೀಡದಿರುವುದು ಕ್ರಮಬದ್ಧವಾಗಿರುವುದಿಲ್ಲವೆಂದು ತಿಳಿಸಿ, ಮೇಲೆ (1) ರಲ್ಲಿ ಓದಲಾದ ದಿನಾಂಕ 16.12.2011 ರ ಆದೇಶದಲ್ಲಿ ಸೀನಿಯರ್ ರೆಸಿಡೆಂಟ್ಸ್‌ಗಳಿಗೆ ನಿಗಧಿಪಡಿಸಲಾಗಿದ್ದ ₹. 6000/– ಗಳ ಅಕಾಡೆಮಿಕ್ ಗ್ರೇಡ್ ಪೇ ಯನ್ನು ಮುಂದುವರಿಸುವಂತೆ ಕೋರಿ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಮೇಲೆ (3) ರಲ್ಲಿ ಓದಲಾದ ರಿಟ್ ಅರ್ಜಿ ದಾಖಲಿಸಿರುತ್ತಾರೆ. ಸದರಿ ರಿಟ್ ಅರ್ಜಿಯಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ 16.04.2013 ರಂದು ನೀಡಿರುವ ಅಂತಿಮ ತೀರ್ಪಿನಲ್ಲಿ ದಿನಾಂಕ 16.12.2011 ರಂದು ಸರ್ಕಾರವು ಹೊರಡಿಸಿದ ಆದೇಶಕ್ಕೆ ಮಾರ್ಪಾಡು ಮಾಡಿರುವ ದಿನಾಂಕ 16.10.2012 ರ ಆದೇಶವನ್ನು ರದ್ದುಪಡಿಸುತ್ತಾ, ಸರ್ಕಾರವು ಅರ್ಜಿದಾರರುಗಳ ಅಹವಾಲುಗಳನ್ನು ಆಲಿಸಿದ ನಂತರ ಅವರ ವೇತನವನ್ನು ನಿಗಧಿಪಡಿಸುವಂತೆ ನಿರ್ದೇಶನ ನೀಡಿರುತ್ತದೆ.

ಮಾನ್ಯ ಘನ ನ್ಯಾಯಾಲಯದ ನಿರ್ದೇಶನದನ್ವಯ ಅರ್ಜಿದಾರರಾದ ಬೀದರ್ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯ ಸೀನಿಯರ್ ರೆಸಿಡೆಂಟ್ಸ್‌ಗಳಿಗೆ ತಮ್ಮ ಅಹವಾಲು ಹಾಗೂ ಹೇಳಿಕೆಗಳನ್ನು ಸಲ್ಲಿಸುವಂತೆ ಸರ್ಕಾರವು ಅವಕಾಶ ನೀಡಿ, ವಿಚಾರಣೆ ನಡೆಸಿದ್ದು, ಸದರಿಯವರಿಂದ ಸ್ವೀಕೃತಗೊಂಡ ಅಹವಾಲುಗಳಲ್ಲಿ ಎಂಸಿಐ ನಿಯಮಗಳನ್ವಯ ಕ್ಲಿನಿಕಲ್ ವಿಭಾಗದಲ್ಲಿ ಸೀನಿಯರ್ ರೆಸಿಡೆಂಟ್‌ಗಳ ಹುದ್ದೆಯು ಆವಶ್ಯವಿದ್ದು, ತಾವು ದಿನದ 24 ಗಂಟೆಗಳ

ಪಾಳಿಯಲ್ಲಿ ಕೆಲಸ ನಿರ್ವಹಿಸುತ್ತಿರುವುದಾಗಿ ಹಾಗೂ ಆಸ್ಪತ್ರೆಗಳಿಗೆ ಆಗಮಿಸುವ ರೋಗಿಗಳಿಗೆ ಪ್ರಾಥಮಿಕ ಹಂತದ ಹಾಗೂ ತುರ್ತು ಚಿಕಿತ್ಸೆಯನ್ನು ಒದಗಿಸುತ್ತಿರುವುದಾಗಿ ಹಾಗೂ ಎಂಬಿಬಿಎಸ್ ವಿದ್ಯಾರ್ಥಿಗಳಿಗೆ ಪ್ರಾಥಮಿಕ ಹಂತದ ಬೋಧನೆಯನ್ನು ಸಹ ನೀಡುತ್ತಿರುವುದಾಗಿ ತಿಳಿಸಿರುತ್ತಾರೆ. ಎಂಸಿಐ ಮಾರ್ಗಸೂಚಿಗಳನ್ವಯ ಕ್ಲಿನಿಕಲ್ ವಿಭಾಗಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸೀನಿಯರ್ ರೆಸಿಡೆಂಟ್‌ಗಳು ಕನಿಷ್ಠ 03 ವರ್ಷ ಜೂನಿಯರ್ ರೆಸಿಡೆಂಟ್ ಹುದ್ದೆಯಲ್ಲಿ ಕಾರ್ಯನಿರ್ವಹಿಸಬೇಕಾಗಿದ್ದು, ಸೀನಿಯರ್ ರೆಸಿಡೆಂಟ್ ಹುದ್ದೆಗಳನ್ನು ಖಾಯಂ ಟ್ಯೂಟರ್ ಹುದ್ದೆಗಳೆಂದು ಪದನಾಮೀಕರಿಸಲು ಎಂಸಿಐ ನಿಯಮಗಳಲ್ಲಿ ಅವಕಾಶವಿರುವುದಿಲ್ಲವೆಂದು ತಿಳಿಸಿ, ಸೀನಿಯರ್ ರೆಸಿಡೆಂಟ್ ಹುದ್ದೆಗೆ ದಿನಾಂಕ 16.12.2011 ರ ಆದೇಶದಲ್ಲಿ ನಿಗಧಿಪಡಿಸಿರುವಂತೆ ವೇತನ ಶ್ರೇಣಿಯನ್ನು ಹಾಗೂ ಅಕಾಡೆಮಿಕ್ ಗ್ರೇಡ್ ಪೇಯನ್ನು ಮುಂದುವರಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಗೂ ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, ಸರ್ಕಾರದ ಆದೇಶ ಸಂಖ್ಯೆ: ಆಕುಕ 320 ಎಂಎಂಸಿ 2011, ದಿನಾಂಕ 16.10.2012 ರಲ್ಲಿ ವೈದ್ಯಕೀಯ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಸ್ವಾಯತ್ತ ಸಂಸ್ಥೆಗಳಲ್ಲಿನ ಖಾಯಂ ಸೀನಿಯರ್ ರೆಸಿಡೆಂಟ್ ಹುದ್ದೆಯನ್ನು ಖಾಯಂ ಟ್ಯೂಟರ್ ಹುದ್ದೆಯನ್ನಾಗಿ ಮರು ಪದನಾಮೀಕರಿಸಿರುವುದನ್ನು ರದ್ದುಪಡಿಸಿ, ದಿನಾಂಕ 16.12.2011 ರ ಆದೇಶದನ್ವಯ ಖಾಯಂ ಸೀನಿಯರ್ ರೆಸಿಡೆಂಟ್ ಹುದ್ದೆಗೆ ದಿನಾಂಕ 01.04.2011 ರಿಂದ ಅನ್ವಯವಾಗುವಂತೆ 2006 ರ ಅಖಿಲ ಭಾರತ ತಾಂತ್ರಿಕ ಶಿಕ್ಷಣ ಪರಿಷತ್ತಿನ (AICTE) ವೇತನ ಶ್ರೇಣಿ ಹಾಗೂ ಅಕಾಡೆಮಿಕ್ ಗ್ರೇಡ್ ಪೇಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 36 ಎಂಎಸ್‌ಎಫ್ 2013, ಬೆಂಗಳೂರು, ದಿನಾಂಕ 09.10.2015.**

ಸರ್ಕಾರದ ಆದೇಶ ಸಂಖ್ಯೆ:ಆಕುಕ 320 ಎಂಎಂಸಿ 2011, ದಿನಾಂಕ 16.10.2012 ರಲ್ಲಿ ವೈದ್ಯಕೀಯ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಸ್ವಾಯತ್ತ ಸಂಸ್ಥೆಗಳಲ್ಲಿನ ಖಾಯಂ ಸೀನಿಯರ್ ರೆಸಿಡೆಂಟ್ ಹುದ್ದೆಯನ್ನು ಖಾಯಂ ಟ್ಯೂಟರ್ ಹುದ್ದೆಯನ್ನಾಗಿ ಮರು ಪದನಾಮೀಕರಿಸಿರುವುದನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿ, ಎಂಸಿಐ ನಿಯಮಗಳನ್ವಯ ಖಾಯಂ ಸೀನಿಯರ್ ರೆಸಿಡೆಂಟ್ ಹಾಗೂ ಖಾಯಂ ಟ್ಯೂಟರ್ ಹುದ್ದೆಗಳನ್ನು ಪ್ರತ್ಯೇಕ ವೃಂದವಾಗಿ ಮುಂದುವರಿಸಲು ಆದೇಶಿಸಿದೆ.

ಮುಂದುವರಿದು, ದಿನಾಂಕ 16.12.2011 ರ ಆದೇಶದಲ್ಲಿ ನಿಗಧಿಪಡಿಸಲಾದಂತೆ ಖಾಯಂ ಸೀನಿಯರ್ ರೆಸಿಡೆಂಟ್ ಹುದ್ದೆಗೆ ದಿನಾಂಕ 01.04.2011 ರಿಂದ ಅನ್ವಯವಾಗುವಂತೆ ಕೆಳಕಂಡ 2006 ರ ಅಖಿಲ ಭಾರತ ತಾಂತ್ರಿಕ ಶಿಕ್ಷಣ ಪರಿಷತ್ತಿನ (AICTE) ಪರಿಷ್ಕೃತ ವೇತನ ಶ್ರೇಣಿಯನ್ನು ಮುಂದುವರಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ವೃಂದದ ಪದನಾಮ | ವೇತನ ಶ್ರೇಣಿ ₹. | ಅಕಾಡೆಮಿಕ್ ಗ್ರೇಡ್ ವೇತನ ₹. |
|---|---|---|---|
| 1. | ಖಾಯಂ ಸೀನಿಯರ್ ರೆಸಿಡೆಂಟ್ಸ್ | 15600–39100 | 6000 |

ಸದರಿಯವರಿಗೆ ಪಾವತಿಯಾಗಬೇಕಾದ ಹಿಂಬಾಕಿ ವೇತನವನ್ನು ಆಯಾ ಸ್ವಾಯತ್ತ ಸಂಸ್ಥೆಗಳಿಗೆ 2015–16 ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆಯಡಿಯಲ್ಲಿ ಒದಗಿಸಲಾಗಿರುವ / ಒದಗಿಸಲಾಗುವ ಅನುದಾನದಲ್ಲಿ ಭರಿಸತಕ್ಕದ್ದು.

ಸರ್ಕಾರದ ಆದೇಶ ಸಂಖ್ಯೆ:ಆಕುಕ 320 ಎಂಎಂಸಿ 2011, ದಿನಾಂಕ 16.10.2012 ರನ್ವಯ ಖಾಯಂ ಟ್ಯೂಟರ್ ಹುದ್ದೆಗೆ ನಿಗಧಿಪಡಿಸಲಾಗಿರುವ ವೇತನ ಶ್ರೇಣಿ ಹಾಗೂ ಅಕಾಡೆಮಿಕ್ ಗ್ರೇಡ್ ಪೇಯನ್ನು ಮತ್ತು ದಿನಾಂಕ 19.05.2007 ರಂದು ಹಾಗೂ ತದನಂತರದಲ್ಲಿ ನೇಮಕಾತಿ ಹೊಂದಿದ ಜೂನಿಯರ್ ರೆಸಿಡೆಂಟ್ಸ್ ಹಾಗೂ ಟ್ಯೂಟರ್‌ಗಳಿಗೆ ಈಗಾಗಲೇ ನಿಗಧಿಪಡಿಸಿರುವ ಪರಿಷ್ಕೃತ ಸಂಚಿತ ವೇತನವನ್ನು ಯಥಾವತ್ತಾಗಿ ಮುಂದುವರಿಸತಕ್ಕದ್ದು.

ಇನ್ನುಳಿದಂತೆ, ಸರ್ಕಾರದ ಆದೇಶ ಸಂಖ್ಯೆ:ಆಕುಕ 4 ಎಂಎಂಸಿ 2010, ದಿನಾಂಕ 16.12.2011 ರ ಆದೇಶ ಹಾಗೂ ಇತರೆ ಎಲ್ಲಾ ಷರತ್ತು ಮತ್ತು ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 719 ವೆಚ್ಚ–5/2015, ದಿನಾಂಕ 01.10.2015 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎಸ್.ಗೌರಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. (ವೈದ್ಯಕೀಯ ಶಿಕ್ಷಣ)

**PR. 611**

**SC. 250**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಕು. ಪ್ರವಳಿಕ ಶ್ರೀನಿವಾಸ್, ಎಂ.ಎಸ್. ರಾಮಯ್ಯ ಮೆಡಿಕಲ್ ಕಾಲೇಜು, ಬೆಂಗಳೂರು ಇವರಿಗೆ ಪ್ರಥಮ ವರ್ಷದ ಎಂಬಿಬಿಎಸ್ ಕೋರ್ಸಿನ ಬೋಧನಾ ಶುಲ್ಕ ಮರುಪಾವತಿ ಸಂಬಂಧ ವಿಳಂಬ ಮನ್ನಾ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇವರ ಪತ್ರ ಸಂಖ್ಯೆ: ವೈಶಿ/ಯುಜಿ–ಪಿಜಿ/ಶುಮ/01/2015–16, ದಿ: 25–06–2015 & 14–09–2015.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇವರು ಕು: ಸಹನ. ಎಸ್, ಕಸ್ತೂರ ಬಾ ಮೆಡಿಕಲ್ ಕಾಲೇಜು, ಮಣಿಪಾಲ್ ಮತ್ತು ಕು: ಪ್ರವಳಿಕ ಶ್ರೀನಿವಾಸ್, ಎಂ.ಎಸ್ ರಾಮಯ್ಯ ಮೆಡಿಕಲ್ ಕಾಲೇಜು, ಬೆಂಗಳೂರು ಇವರು ಎಂಬಿಬಿಎಸ್ ವ್ಯಾಸಂಗ ಮಾಡುತ್ತಿದ್ದು, ಪರಿಶಿಷ್ಟ ಜಾತಿಗೆ ಸೇರಿದವರಾಗಿರುತ್ತಾರೆ. ಇವರುಗಳ ಕುಟುಂಬದ ವಾರ್ಷಿಕ ವರಮಾನ ₹. 2.50 ಲಕ್ಷಕ್ಕಿಂತ ಅಧಿಕವಿದ್ದು, ಈ ನಿರ್ದೇಶನಾಲಯಕ್ಕೆ ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ. ಇವರು ಮನವಿ ಸಲ್ಲಿಸಿ 2014–15 ನೇ ಸಾಲಿನಲ್ಲಿ ಬೋಧನಾ ಶುಲ್ಕ ಮರುಪಾವತಿ ಕೋರಿ ವೈದ್ಯಕಿಯ ಶಿಕ್ಷಣ ನಿರ್ದೇಶನಾಲಯಕ್ಕೆ

ಅರ್ಜಿ ಸಲ್ಲಿಸಲು ಸಾಧ್ಯವಾಗಿರುವುದಿಲ್ಲ. ಆದ್ದರಿಂದ ಅರ್ಜಿಯನ್ನು ಹಾಲಿ ವರ್ಷದಲ್ಲಿ ಸಲ್ಲಿಸುತ್ತಿದ್ದು, ಶುಲ್ಕ ಮಂಜೂರು ಮಾಡಲು ಅವಕಾಶವಿಲ್ಲದಿದ್ದಲ್ಲಿ ಸರ್ಕಾರದಿಂದ ವಿಳಂಬ ಮನ್ನಾ ಆದೇಶ ಪಡೆದು ಮಂಜೂರು ಮಾಡಲು ಕೋರಿರುತ್ತಾರೆ.

ಸದರಿ ಮನವಿಗಳ ಬಗ್ಗೆ ಪರಿಶೀಲಿಸಿ, ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್ 229 ಬಿಸಿಎ 80, ದಿನಾಂಕ: 16.12.1982 ರಲ್ಲಿನ ನಿಯಮ IV

**a)** The Heads of the Institutions shall forward detailed information about each applicant in a form to be prescribed by the sanctioning authority (vide Rule IV) along with the declaration produced by the students. This information should be sent to the sanctioning authorities concerned on or before the date prescribed by them.

**b)** Students who fail to produce the declaration within the date prescribed by the sanctioning authority shall pay the fees which they would have been exempted from paying under these rules.

ಎಂದು ತಿಳಿಸಿರುವುದರಿಂದ ಅವರು ನಿಗದಿತ ಅವಧಿಯಲ್ಲಿ ಅರ್ಜಿ ಸಲ್ಲಿಸದ ಕಾರಣ ಹಾಲಿ ವರ್ಷದಲ್ಲಿ ಹಿಂದಿನ ವರ್ಷದ ಶುಲ್ಕವನ್ನು ಈ ನಿರ್ದೇಶನಾಲಯದ ಅಧಿಕಾರ ವ್ಯಾಪ್ತಿಯಲ್ಲಿ ಮಂಜೂರು ಮಾಡಲು ಬರುವುದಿಲ್ಲ. ಈ ಬಗ್ಗೆ ಸರ್ಕಾರದಿಂದ ವಿಳಂಬ ಮನ್ನಾ ಆದೇಶ ನೀಡಿದ್ದಲ್ಲಿ ಮುಂದಿನ ಕ್ರಮ ತೆಗೆದುಕೊಳ್ಳಲಾಗುವುದೆಂಬ ಮಾಹಿತಿಯನ್ನು ಸರ್ಕಾರದ ಅವಗಾಹನೆಗೆ ಸಲ್ಲಿಸಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, ಕು: ಪ್ರವಳಿಕ ಶ್ರೀನಿವಾಸ್, ಎಂ.ಎಸ್. ರಾಮಯ್ಯ ಮೆಡಿಕಲ್ ಕಾಲೇಜು, ಬೆಂಗಳೂರು ಇವರಿಗೆ ಪ್ರಥಮ ವರ್ಷದ ಎಂಬಿಬಿಎಸ್ ಕೋರ್ಸಿನ 2014–15 ನೇ ಸಾಲಿನ ಬೋಧನಾ ಶುಲ್ಕವನ್ನು ವಿಳಂಬ ಮನ್ನಾ ಮಾಡಿ ಪ್ರಸಕ್ತ ಸಾಲಿನಲ್ಲಿ ಮರುಪಾವತಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 237 ಆರ್‌ಜಿಯು 2015, ಬೆಂಗಳೂರು, ದಿನಾಂಕ: 29–10–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕು: ಪ್ರವಳಿಕ ಶ್ರೀನಿವಾಸ್, ಎಂ.ಎಸ್. ರಾಮಯ್ಯ ಮೆಡಿಕಲ್ ಕಾಲೇಜು, ಬೆಂಗಳೂರು ಇವರಿಗೆ ಪ್ರಥಮ ವರ್ಷದ ಎಂಬಿಬಿಎಸ್ ಕೋರ್ಸಿನ 2014–15 ನೇ ಸಾಲಿನ ಬೋಧನಾ ಶುಲ್ಕವನ್ನು ಪ್ರಸಕ್ತ ಸಾಲಿನಲ್ಲಿ ಮರುಪಾವತಿಸಲು ಈ ಕೆಳಕಂಡ ಷರತ್ತಿಗೊಳಪಟ್ಟು, ವಿಳಂಬ ಮನ್ನಾ ಮಾಡಿ ಆದೇಶಿಸಿದೆ.

1) ವಿದ್ಯಾರ್ಥಿನಿಯು ಸರ್ಕಾರಿ ಕೋಟಾದಡಿಯಲ್ಲಿ ಪ್ರವೇಶ ಪಡೆದಿರಬೇಕು.
2) ವಿದ್ಯಾರ್ಥಿನಿಯ ಕುಟುಂಬ ವಾರ್ಷಿಕ ವರಮಾನ ರೂ. 2.50 ಲಕ್ಷಕ್ಕಿಂತ ಅಧಿಕವಾಗಿರಬೇಕು.
3) ಕಾಲೇಜಿನಿಂದ ಹಾಜರಾತಿ ಹಾಗೂ ನಡತೆ ಪ್ರಮಾಣ ಪತ್ರ ಪಡೆದು ಸಲ್ಲಿಸಬೇಕು.
4) ವ್ಯಾಸಂಗ ಮುಗಿದ ನಂತರ ಸರ್ಕಾರಿ ಸೇವೆ ಸಲ್ಲಿಸುವ ಬಗ್ಗೆ ಬಂಧಪತ್ರ ನೀಡಿರುವ ಬಗ್ಗೆ ಖಚಿತ ಪಡಿಸಿಕೊಳ್ಳುವುದು.
5) ಕಾಲೇಜಿಗೆ ಪ್ರಥಮ ವರ್ಷಕ್ಕೆ ಸರ್ಕಾರ ನಿಗಧಿಪಡಿಸಿರುವ ದರದಲ್ಲಿ ಬೋಧನಾ ಶುಲ್ಕ ಪಾವತಿಸಿರುವ ಬಗ್ಗೆ ಖಚಿತಪಡಿಸಿಕೊಳ್ಳುವುದು.
6) ಸರ್ಕಾರಿ ಆದೇಶ ಸಂಖ್ಯೆ: ಆಕುಕ 407 ಎಂಪಿಎಸ್ 2006, ದಿ: 25–03–2008 ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಆಕುಕ 101 ಆರ್‌ಜಿಯು 2012, ದಿನಾಂಕ: 10–05–2012 ರಂತೆ, ಇವರಿಗೆ ನಿಗಧಿಪಡಿಸಿರುವ ಬೋಧನಾ ಶುಲ್ಕದ ಮೊತ್ತವನ್ನು ಮರುಪಾವತಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಆಕುಕ 1111 ಆಂಆಸ 2015, ದಿ: 17–10–2015 ರ ಅಭಿಪ್ರಾಯದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ. ಮುರಳಿ**
ಸರ್ಕಾರದ ಅಧೀನ ಕಾರ್ಯದರ್ಶಿ–2(ಪ್ರ),
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. (ವೈದ್ಯಕೀಯ ಶಿಕ್ಷಣ)

**PR. 656**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಗೃಹ ವೈದ್ಯ, ಸ್ನಾತಕೋತ್ತರ ಮತ್ತು ಸೂಪರ್ ಸ್ಪೆಷಾಲಿಟಿ ವಿದ್ಯಾರ್ಥಿಗಳ ಮಾಸಿಕ ಶಿಷ್ಯವೇತನ (Stipend)ವನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಆಕುಕ 89 ಎಂಪಿಎಸ್ 2011, ದಿ: 08–11–2011.
2) ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇವರ ದಿ: 26–08–2015 ರ ಪತ್ರ ಸಂಖ್ಯೆ: ಎಂಇಎಸ್(2)/90/ 2010–11.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಸರ್ಕಾರದ ಆದೇಶದಲ್ಲಿ ಗೃಹ ವೈದ್ಯರಿಗೆ ₹.15000.00, ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ₹. 25000.00 ಮತ್ತು ಸೂಪರ್ ಸ್ಪೆಷಾಲಿಟಿ ವಿದ್ಯಾರ್ಥಿಗಳಿಗೆ ₹. 30000.00 ಗಳನ್ನು ಮಾಸಿಕ ಶಿಷ್ಯವೇತನ (Stipend) ವನ್ನಾಗಿ ನಿಗಧಿಗೊಳಿಸಲಾಗಿತ್ತು.

ಪ್ರಸ್ತುತ ಕರ್ನಾಟಕ ನಿವಾಸಿ ವೈದ್ಯರುಗಳ ಸಂಘ, ಬೆಂಗಳೂರು ಹಾಗೂ ರಾಜ್ಯದ ವಿವಿಧ ಸ್ವಾಯತ್ತ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಎಂಬಿಬಿಎಸ್ ಗೃಹವೈದ್ಯರು & ಕಿರಿಯ ವೈದ್ಯರುಗಳು ಸರ್ಕಾರಕ್ಕೆ ಮನವಿ ಸಲ್ಲಿಸಿ, ಅವರುಗಳು ವರ್ಷದ 365 ದಿನಗಳಲ್ಲಿ ಯಾವುದೇ ವಾರಾಂತ್ಯದ ರಜೆಯನ್ನು ಪಡೆಯದೇ ಕೆಲವೊಂದು ಸಂದರ್ಭಗಳಲ್ಲಿ ಸತತವಾಗಿ 48 ರಿಂದ 60 ಗಂಟೆಗಳ ಕಾಲ ಕರ್ತವ್ಯ ವಿಸ್ತರಿಸಲ್ಪಟ್ಟು ಆಸ್ಪತ್ರೆಯ ಎಲ್ಲಾ ವಿಭಾಗಗಳಲ್ಲಿ

ಅಂದರೆ ಹೊರ ರೋಗಿ ವಿಭಾಗ, ಒಳ ರೋಗಿ ವಿಭಾಗ, ಹೆರಿಗೆ ವಾರ್ಡ್ ಇತ್ಯಾದಿಗಳಲ್ಲಿ ಕಾರ್ಯನಿರ್ವಹಿಸುತ್ತಿರುವುದರಿಂದ ಅವರಿಗೆ ನೀಡುತ್ತಿರುವ ಮಾಸಿಕ ಶಿಷ್ಯವೇತನವನ್ನು ಹೆಚ್ಚಳ ಮಾಡುವಂತೆ ಕೋರಿರುತ್ತಾರೆ.

ಈ ಸಂಬಂಧ ವೈದ್ಯಕೀಯ ಶಿಕ್ಷಣ ಇಲಾಖೆ ನಿರ್ದೇಶಕರ ಅಭಿಪ್ರಾಯವನ್ನು ಪಡೆಯಲಾಗಿ, ಪ್ರಸ್ತುತ ನೀಡುತ್ತಿರುವ ಮಾಸಿಕ ಶಿಷ್ಯವೇತನವು 4 ವರ್ಷಗಳ ಹಿಂದೆ ಅಂದರೆ 2011 ರಲ್ಲಿ ನಿಗಧಿಪಡಿಸಿದ ಮಾಸಿಕ ಶಿಷ್ಯವೇತನವಾಗಿದ್ದು, ದೇಶದ ಇತರೆ ರಾಜ್ಯಗಳಲ್ಲಿ ನೀಡುತ್ತಿರುವ ಶಿಷ್ಯವೇತನವನ್ನು ಗಮನದಲ್ಲಿಟ್ಟುಕೊಂಡು, ವೈದ್ಯಕೀಯ ಶಿಕ್ಷಣ ನಿರ್ದೇಶಕರು ಮೇಲೆ ಓದಲಾದ (2) ರ ಪತ್ರದಲ್ಲಿ ಎಂಬಿಬಿಎಸ್ ಗೃಹವೈದ್ಯರ ಮಾಸಿಕ ಶಿಷ್ಯವೇತನವನ್ನು ₹. 15,000/– ದಿಂದ ₹. 20,000/– ಗಳಿಗೆ, ಸ್ನಾತಕೋತ್ತರ ವೈದ್ಯರುಗಳ ಮಾಸಿಕ ಶಿಷ್ಯವೇತನವನ್ನು ಮೊದಲನೇ ವರ್ಷಕ್ಕೆ ₹. 25,000/– ದಿಂದ ₹.. 30,000/– ಗಳಿಗೆ, ಎರಡನೇ ವರ್ಷಕ್ಕೆ ₹. 25,000/– ದಿಂದ ₹. 35,000/– ಗಳಿಗೆ ಮತ್ತು ಮೂರನೇ ವರ್ಷಕ್ಕೆ ₹. 25,000/– ದಿಂದ ₹. 40,000/– ಗಳಿಗೆ ಹಾಗೂ ಸೂಪರ್ ಸ್ಪೆಷಾಲಿಟಿ ವೈದ್ಯರುಗಳ ಮಾಸಿಕ ಶಿಷ್ಯವೇತನವನ್ನು ಮೊದಲನೇ ವರ್ಷಕ್ಕೆ ₹. 30,000/– ದಿಂದ ₹. 40,000/– ಗಳಿಗೆ, ಎರಡನೇ ವರ್ಷಕ್ಕೆ ₹. 30,000/– ದಿಂದ ₹. 45,000/– ಗಳಿಗೆ ಮತ್ತು ಮೂರನೇ ವರ್ಷಕ್ಕೆ ₹. 30,000/– ದಿಂದ ₹. 50,000/– ಗಳಿಗೆ ಹೆಚ್ಚಿಸಲು ಶಿಫಾರಸ್ಸು ಮಾಡಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, ವೈದ್ಯಕೀಯ ಶಿಕ್ಷಣ ನಿರ್ದೇಶಕರ ಅಭಿಪ್ರಾಯದಂತೆ ಗೃಹವೈದ್ಯ, ಸ್ನಾತಕೋತ್ತರ ಮತ್ತು ಸೂಪರ್ ಸ್ಪೆಷಾಲಿಟಿ ವಿದ್ಯಾರ್ಥಿಗಳ ಮಾಸಿಕ ಶಿಷ್ಯವೇತನ (Stipend) ವನ್ನು ಹೆಚ್ಚಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಗಿನಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 192 ಆರ್‌ಜಿಯು 2014, ಬೆಂಗಳೂರು, ದಿನಾಂಕ: 30–09–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯದ ಸ್ವಾಯತ್ತ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಗೃಹವೈದ್ಯ, ಸ್ನಾತಕೋತ್ತರ & ಸೂಪರ್ ಸ್ಪೆಷಾಲಿಟಿ ವಿದ್ಯಾರ್ಥಿಗಳ ಮಾಸಿಕ ಶಿಷ್ಯವೇತನ (Stipend) ವನ್ನು ದಿ: 01–10–2015 ರಿಂದ ಜಾರಿಗೆ ಬರುವಂತೆ ಎಂಬಿಬಿಎಸ್ ಗೃಹವೈದ್ಯರ ಮಾಸಿಕ ಶಿಷ್ಯವೇತನವನ್ನು ₹. 15,000/– ದಿಂದ ₹. 20,000/– ಗಳಿಗೆ, ಸ್ನಾತಕೋತ್ತರ ವೈದ್ಯರುಗಳ ಮಾಸಿಕ ಶಿಷ್ಯವೇತನವನ್ನು ಮೊದಲನೇ ವರ್ಷಕ್ಕೆ ರೂ. 25,000/– ದಿಂದ ₹. 30,000/– ಗಳಿಗೆ, ಎರಡನೇ ವರ್ಷಕ್ಕೆ ₹. 25,000/– ದಿಂದ ₹. 35,000/– ಗಳಿಗೆ ಮತ್ತು ಮೂರನೇ ವರ್ಷಕ್ಕೆ ₹. 25,000/– ದಿಂದ ₹. 40,000/– ಗಳಿಗೆ ಹಾಗೂ ಸೂಪರ್ ಸ್ಪೆಷಾಲಿಟಿ ವೈದ್ಯರುಗಳ ಮಾಸಿಕ ಶಿಷ್ಯವೇತನವನ್ನು ಮೊದಲನೇ ವರ್ಷಕ್ಕೆ ₹. 30,000/– ದಿಂದ

₹. 40,000/– ಗಳಿಗೆ, ಎರಡನೇ ವರ್ಷಕ್ಕೆ ₹. 30,000/– ದಿಂದ ₹. 45,000/– ಗಳಿಗೆ ಮತ್ತು ಮೂರನೇ ವರ್ಷಕ್ಕೆ ₹. 30,000/– ದಿಂದ ₹.50,000/– ಗಳಿಗೆ ಹೆಚ್ಚಿಸಿ ಆದೇಶಿಸಲಾಗಿದೆ.

ಮುಂದುವರಿದು, ಇದಕ್ಕೆ ಸಂಬಂಧಿಸಿದಂತೆ ತಗಲುವ ವೆಚ್ಚವನ್ನು ಆಯಾ ಸ್ವಾಯತ್ತ ಸಂಸ್ಥೆಗಳಿಗೆ ಒದಗಿಸಿರುವ ಅನುದಾನದಲ್ಲಿಯೇ ಭರಿಸತಕ್ಕದ್ದು.

ಈ ಆದೇಶವನ್ನು ಸಚಿವ ಸಂಪುಟದ ಪ್ರಕರಣ ಸಂಖ್ಯೆ: ಸಿ: 487/2015, ದಿನಾಂಕ: 19–09–2015 ರಲ್ಲಿ ನೀಡಿರುವ ಅನುಮೋದನೆಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಕೆ. ನಾಗವೇಣಿ**

ಸರ್ಕಾರದ ಅಧೀನ ಕಾರ್ಯದರ್ಶಿ–2,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. (ವೈದ್ಯಕೀಯ ಶಿಕ್ಷಣ)

**PR. 633**

**SC. 50**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:–** ಬಿ.ಪಿ.ಎಲ್.ಗೆ ಒಳಪಟ್ಟ ಅಸಂಘಟಿತ ಕಾರ್ಮಿಕರಿಗಾಗಿ ಕೇಂದ್ರ ಸರ್ಕಾರದ ಮತ್ತು ರಾಜ್ಯ ಸರ್ಕಾರದ ಸಹ ಭಾಗಿತ್ವದಲ್ಲಿ (75% ಮತ್ತು 25%) ಆಯೋಜಿತ ರಾಷ್ಟ್ರೀಯ ಸ್ವಾಸ್ಥ್ಯ ಭೀಮಾ ಯೋಜನೆಯನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಅಡಿಯಲ್ಲಿನ ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ಮೂಲಕ ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ:**

1. ಭಾರತ ಸರ್ಕಾರದ ಕಾರ್ಮಿಕ ಮತ್ತು ಉದ್ಯೋಗ ಮಂತ್ರಾಲಯದ ಕಾರ್ಯಕಾರಿ ಆದೇಶ ಸಂಖ್ಯೆ: F.No.M-20121/14/15-RW, ದಿನಾಂಕ:17–03–2015.
2. ಭಾರತ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮಂತ್ರಾಲಯದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಕಾರ್ಯದರ್ಶಿಯವರ ಅರೆ ಸರ್ಕಾರಿ ಪತ್ರ ಸಂಖ್ಯೆ: S-12102/107/2015-RSB, ದಿನಾಂಕ:11–06–2015.
3. ಸಚಿವ ಸಂಪುಟ ಸಭೆಯ ನಿರ್ಣಯ ಸಂಖ್ಯೆ: ಸಿ:520/2015, ದಿನಾಂಕ:21–09–2015.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಕ್ರಮಾಂಕದ ಕಾರ್ಯಕಾರಿ ಆದೇಶದಲ್ಲಿ, ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತೆಗಾಗಿ ಆರೋಗ್ಯ ವಿಮಾ ಯೋಜನೆಯಾಗಿ ಭಾರತ ಸರ್ಕಾರದ ಕಾರ್ಮಿಕ ಮತ್ತು ಉದ್ಯೋಗ ಮಂತ್ರಾಲಯವು ದಿನಾಂಕ:01–11–2007 ರಿಂದ ಜಾರಿಗೆ ಬರುವಂತೆ ರಾಷ್ಟ್ರೀಯ ಸ್ವಾಸ್ಥ್ಯ ಭೀಮಾ ಯೋಜನೆಯನ್ನು ಅನುಷ್ಠಾನಗೊಳಿಸಿದೆಯೆಂದು ತಿಳಿಸಲಾಗಿದೆ.

ದಿನಾಂಕ:22–09–2015ರಂದು ಭಾರತ ಸರ್ಕಾರದ ಸಚಿವ ಸಂಪುಟ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಕಾರ್ಯದರ್ಶಿಗಳ ವಿಡಿಯೋ ಸಂವಾದ (video conference) ಸಭೆಯಲ್ಲಿ ಕಾರ್ಮಿಕ ಇಲಾಖೆಯ ವತಿಯಿಂದ ವಿಮಾ ಮಾದರಿಯಲ್ಲಿ ಕಾರ್ಯಗತವಾಗುತ್ತಿರುವ ರಾಷ್ಟ್ರೀಯ ಸ್ವಾಸ್ಥ್ಯ ಭೀಮಾ ಯೋಜನೆಯನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಹಸ್ತಾಂತರಿಸಲು ನಿರ್ಧರಿಸಲಾಯಿತು.

ರಾಷ್ಟ್ರೀಯ ಸ್ವಾಸ್ಥ್ಯ ಭೀಮಾ ಯೋಜನೆಯು ಪ್ರಸ್ತುತ ವಿಮಾ ಮಾದರಿಯಲ್ಲಿದ್ದು, (Insurance Mode) ಇದು 2016ನೇ ಫೆಬ್ರವರಿ ತಿಂಗಳಿನಲ್ಲಿ ಕೊನೆಯಾಗಲಿದೆ. ನಂತರ ಈ ಯೋಜನೆಯನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವ್ಯಾಪ್ತಿಯ ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ಮೂಲಕ ತರುವುದರಿಂದ ಆಗುವ ಪ್ರಯೋಜನಗಳನ್ನು ಗಮನಿಸಲಾಗಿದೆ.

ಪ್ರಸ್ತುತ ಅನುಸರಿಸುತ್ತಿರುವ ವಿಮಾ ಮಾದರಿಯಲ್ಲಿ ರಾಜ್ಯವು ಕೇಂದ್ರ ಸರ್ಕಾರದಿಂದ ವಿಮಾ ಕಂತಿನ ಶೇಕಡ 75 ರಷ್ಟು ಸ್ವೀಕರಿಸುತ್ತಿದ್ದು, ವಿಮಾ ಕಂತು ₹. 189/– ಆದಲ್ಲಿ ಒಂದು ನೋಂದಾಯಿತ ಕುಟುಂಬಕ್ಕೆ ರಾಜ್ಯ ಸರ್ಕಾರವು ಕೇವಲ ₹. 142/–ನ್ನು ಮಾತ್ರ ಪಡೆಯುವುದು. ಒಂದು ಬಾರಿ ಈ ಯೋಜನೆಯು ಭರವಸೆಯ ಪದ್ಧತಿಯಡಿ ಅನುಷ್ಠಾನಗೊಂಡಲ್ಲಿ ರಾಜ್ಯ ಸರ್ಕಾರವು ವರ್ಷಕ್ಕೆ ಕುಟುಂಬವೊಂದಕ್ಕೆ ರೂ. 750/– ನ್ನು ಸ್ವೀಕರಿಸುವುದು.

ಮೇಲೆ ಓದಲಾದ (2)ರ ಕ್ರಮಾಂಕದ ಅರೆ ಸರ್ಕಾರಿ ಪತ್ರದಲ್ಲಿ ಭಾರತ ಸರ್ಕಾರದ ಕಾರ್ಮಿಕ ಮತ್ತು ಉದ್ಯೋಗ ಮಂತ್ರಾಲಯದ ವತಿಯಿಂದ ಜಾರಿಗೊಳಿಸಲಾಗುತ್ತಿದ್ದ ರಾಷ್ಟ್ರೀಯ ಸ್ವಾಸ್ಥ್ಯ ಭೀಮಾ ಯೋಜನೆಯನ್ನು ದಿನಾಂಕ: 01–04–2015 ರಿಂದ ಹೇಗಿದೆಯೋ ಅದೇ ಸ್ಥಿತಿಯಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮಂತ್ರಾಲಯಕ್ಕೆ ವರ್ಗಾಯಿಸಿರುವುದಾಗಿ ತಿಳಿಸುತ್ತಾ, ಈ ಕಾರ್ಯಕ್ರಮವನ್ನು ಕಾರ್ಮಿಕ ಇಲಾಖೆಯಿಂದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಆಡಳಿತಾತ್ಮಕ ನಿಯಂತ್ರಣಕ್ಕಾಗಿ ಶೀಘ್ರದಲ್ಲೇ ವರ್ಗಾಯಿಸಲು ತಿಳಿಸಿರುತ್ತದೆ.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯು ಬಿ.ಪಿ.ಎಲ್. ಕುಟುಂಬಗಳಿಗೆ ವಾಜಪೇಯಿ ಆರೋಗ್ಯಶ್ರೀ ಯೋಜನೆ ಮತ್ತು ಎ.ಪಿ.ಎಲ್. ಕುಟುಂಬಗಳಿಗೆ ರಾಜೀವ ಆರೋಗ್ಯ ಭಾಗ್ಯ ಯೋಜನೆಯನ್ನು ಈಗಾಗಲೇ ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ಮೂಲಕ ಆರೋಗ್ಯ ಸೇವೆಯನ್ನು ಒದಗಿಸುತ್ತಿದೆ. ಸದರಿ ಸಂಸ್ಥೆಯು ತಾಂತ್ರಿಕ ಜ್ಞಾನ ಹೊಂದಿದ್ದು, ಮಾಹಿತಿ ತಂತ್ರಜ್ಞಾನದ ಮೂಲಕ ಯೋಜನೆಗಳನ್ನು ನಿರ್ವಹಣೆ ಮಾಡುವ ಪ್ರಾವೀಣ್ಯತೆಯನ್ನು ಹೊಂದಿರುವುದರಿಂದ ರಾಷ್ಟ್ರೀಯ ಸ್ವಾಸ್ಥ್ಯ ಭೀಮಾ ಯೋಜನೆಯನ್ನು ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್‌ಗೆ ವರ್ಗಾಯಿಸಿದಲ್ಲಿ, ಉತ್ತಮ ಗುಣಮಟ್ಟದ ಆರೋಗ್ಯ ಸೇವೆಯನ್ನು ಒದಗಿಸಿದಂತಾಗುತ್ತದೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಗಣಿಸಿ, ಕಾರ್ಮಿಕ ಇಲಾಖೆಯ ವತಿಯಿಂದ ಜಾರಿಗೊಳಿಸಲಾಗುತ್ತಿರುವ ರಾಷ್ಟ್ರೀಯ ಸ್ವಾಸ್ಥ್ಯ ಭೀಮಾ ಯೋಜನೆಯನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ, ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ಮೂಲಕ ಕಾರ್ಯಗತಗೊಳಿಸಲು ನಿರ್ಧರಿಸಲಾಗಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 156 ಸಿಜಿಇ 2014, ಬೆಂಗಳೂರು, ದಿನಾಂಕ: 15–10–2015.**

ಕಾರ್ಮಿಕ ಇಲಾಖೆಯ ವತಿಯಿಂದ ವಿಮಾ ಯೋಜನೆ ಮಾದರಿಯಲ್ಲಿ (Insurance mode) ಕಾರ್ಯಗತಗೊಳಿಸಲಾಗುತ್ತಿರುವ ರಾಷ್ಟ್ರೀಯ ಸ್ವಾಸ್ಥ್ಯ ಭೀಮಾ ಯೋಜನೆಯನ್ನು ಹೇಗಿದೆಯೋ ಅದೇ ಸ್ಥಿತಿಯಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಅಧೀನದಲ್ಲಿರುವ ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ವತಿಯಿಂದ ಭರವಸೆ ಮಾದರಿಯಲ್ಲಿ, ರಾಷ್ಟ್ರೀಯ ಸ್ವಾಸ್ಥ್ಯ ಭೀಮಾ ಯೋಜನೆಯ ಯಾವುದೇ ಸೇವೆಗಳಲ್ಲಿ ವ್ಯತ್ಯಯ ಇಲ್ಲದಂತೆ ವರ್ಗಾಯಿಸತಕ್ಕದ್ದು. ಈ ಯೋಜನೆಯ ಕಾರ್ಯರೂಪಕ್ಕೆ ಸಂಬಂಧಿಸಿದ ಮಾರ್ಗಸೂಚಿಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ರಾಷ್ಟ್ರೀಯ ಸ್ವಾಸ್ಥ್ಯ ಭೀಮಾ ಯೋಜನೆಗೆ ಸಂಬಂಧಿಸಿದ ಎಲ್ಲಾ ಕಡತ/ದಾಖಲೆಗಳನ್ನು ಕಾರ್ಮಿಕ ಇಲಾಖೆಯಿಂದ ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್‌ಗೆ ಕೂಡಲೇ ವರ್ಗಾಯಿಸತಕ್ಕದ್ದು.

ಈ ಆದೇಶವನ್ನು ದಿನಾಂಕ:21–09–2015 ರಲ್ಲಿ ನಡೆದ ಸಚಿವ ಸಂಪುಟದ ಸಭೆಯ ನಿರ್ಣಯದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಎಸ್.ನಾಗರಾಜ್**

PR. 650 ಸರ್ಕಾರದ ಉಪ ಕಾರ್ಯದರ್ಶಿ–1 (ಪ್ರ)

SC. 50 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಪಿ.ಬೋರೇಗೌಡ, ಕ.ಆ.ಸೇ.(ನಿವೃತ್ತ)ರವರನ್ನು ಗುತ್ತಿಗೆ ಆಧಾರದ ಮೇಲೆ ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್‌ನ ಕಾರ್ಯಕಾರಿ ನಿರ್ದೇಶಕರ ಹುದ್ದೆಯಲ್ಲಿ ಒಂದು ವರ್ಷದ ಕಾಲಾವಧಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ.ಆಕುಕ 281 ಸಿಜಿಇ 2012, ದಿ:24.09.2012.

2) ಸರ್ಕಾರದ ಆದೇಶ ಸಂಖ್ಯೆ.ಆಕುಕ 281 ಸಿಜಿಇ 2012, ದಿ:08.11.2012.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯದ ಎಲ್ಲಾ ವರ್ಗದ ಜನರಿಗೆ ಉತ್ತಮ ಆರೋಗ್ಯ ಸೇವೆ ನೀಡುವುದು ರಾಜ್ಯ ಸರ್ಕಾರದ ಮುಖ್ಯ ಉದ್ದೇಶವಾಗಿದ್ದು, ಜನತೆಗೆ ಸುಸಜ್ಜಿತ ಮೇಲ್ದರ್ಜೆಯ (ಸೂಪರ್ ಸ್ಪೆಷಾಲಿಟಿ) ಆಸ್ಪತ್ರೆಗಳ ಆರೋಗ್ಯ ಸೌಲಭ್ಯಗಳನ್ನು ಒದಗಿಸಲು ಸರ್ಕಾರವು ಬದ್ಧವಾಗಿರುತ್ತದೆ. ರಾಜ್ಯದಲ್ಲಿ ಬಡತನ ರೇಖೆಗಿಂತ ಕೆಳಗಿರುವ (ಬಿಪಿಎಲ್) ಕುಟುಂಬಗಳಿಗೆ ವಾಜಪೇಯಿ ಆರೋಗ್ಯಶ್ರೀ ಯೋಜನೆಯನ್ನು ಉತ್ತಮ ಗುಣ ಮಟ್ಟದ ಆರೋಗ್ಯ ರಕ್ಷಣೆಯನ್ನು ನೀಡುವುದಕ್ಕಾಗಿ ರಾಜ್ಯ ಸರ್ಕಾರವು ಭಾರತೀಯ ಟ್ರಸ್ಟ್ ಕಾಯ್ದೆ, 1882ರ ಅಡಿಯಲ್ಲಿ ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್‌ನ್ನು ಸ್ಥಾಪಿಸಿ ನೋಂದಣಿ ಮಾಡಲಾಗಿತ್ತು. ಈ ಟ್ರಸ್ಟ್‌ಗೆ ಎ.ಪಿಎಲ್. ಕುಟುಂಬಗಳಿಗೆ ರಾಜೀವ್ ಆರೋಗ್ಯಭಾಗ್ಯ ಯೋಜನೆ ಮತ್ತು ರಾಜ್ಯ ಸರ್ಕಾರಿ ನೌಕರರಿಗೆ ಜ್ಯೋತಿ ಸಂಜೀವಿನಿ ಯೋಜನೆಗಳನ್ನು ತದನಂತರ ಸೇರಿ ಎಲ್ಲಾ ಯೋಜನೆಗಳನ್ನು ಟ್ರಸ್ಟ್ ಅನುಷ್ಠಾನಗೊಳಿಸಲಾಗುತ್ತದೆ.

ಮೇಲೆ ಓದಲಾದ ಕ್ರ.ಸಂ.(1)ರ ಸರ್ಕಾರದ ಆದೇಶದಲ್ಲಿ ಡಾ:ಪಿ.ಬೋರೇಗೌಡ, ನಿವೃತ್ತ ಕೆ.ಎ.ಎಸ್. ಅಧಿಕಾರಿ ಇವರನ್ನು ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್‌ನ ಕಾರ್ಯಕಾರಿ ನಿರ್ದೇಶಕರ ಹುದ್ದೆಗೆ ಗುತ್ತಿಗೆ ಆಧಾರದ ಮೇಲೆ ಗುತ್ತಿಗೆ ಆಧಾರದ ನೇಮಕಾತಿಯ ವೇತನ ಮತ್ತು ಇತರ ಸೌಲಭ್ಯಗಳನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ನಿಗಧಿ ಪಡಿಸಿರುವ Norms ಅನ್ವಯ ಮಂಜೂರು ಮಾಡಿ ಆದೇಶವನ್ನು ಹೊರಡಿಸಲಾಗಿದೆ. ಸದರಿಯವರ ಸೇವಾವಧಿಯು ದಿನಾಂಕ:24.09.2015ಕ್ಕೆ ಪೂರ್ಣಗೊಳ್ಳುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸರ್ಕಾರಿ ಆದೇಶದಲ್ಲಿ ಡಾ: ಪಿ.ಬೋರೇಗೌಡ, ಕಾರ್ಯಕಾರಿ ನಿರ್ದೇಶಕರು, ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್, ಬೆಂಗಳೂರು ಅವರ ಸೇವಾ ಷರತ್ತು ಮತ್ತು ನಿಬಂಧನೆಗಳನ್ನು ನಿಗಧಿಪಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಆಕುಕ 256 ಸಿಜಿಇ 2015, ಬೆಂಗಳೂರು, ದಿನಾಂಕ:23.09.2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಡಾ:.ಪಿ.ಬೋರೇಗೌಡ, ನಿವೃತ್ತ ಕೆ.ಎ.ಎಸ್. ಅಧಿಕಾರಿ ಅವರನ್ನು ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಕಾರ್ಯಕಾರಿ ನಿರ್ದೇಶಕರು, ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್, ಬೆಂಗಳೂರು ಹುದ್ದೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಪುನ: ದಿನಾಂಕ:25.09.2015 ರಿಂದ ದಿನಾಂಕ:24.09.2016ರವರೆಗೆ ನೇಮಿಸಲಾಗಿದೆ.

ಸದರಿಯವರ ಗುತ್ತಿಗೆ ಆಧಾರದ ನೇಮಕಾತಿ ವೇತನ ಮತ್ತು ಇತರ ಸೌಲಭ್ಯಗಳು ಸರ್ಕಾರದ ಆದೇಶ ಸಂಖ್ಯೆ.ಆಕುಕ 281 ಸಿಜಿಇ 2012, ದಿನಾಂಕ:08.11.2012ರಲ್ಲಿ ನಿಗಧಿಪಡಿಸಿರುವ ಷರತ್ತು ಮತ್ತು ನಿಬಂಧನೆಗಳು ದಿನಾಂಕ:25.09.2015 ರಿಂದ 24.09.2016ರವರೆಗೆ ಯಥವತ್ತಾಗಿ ಅನ್ವಯವಾಗತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ವಿ. ಕಲಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
(ಆರೋಗ್ಯ 1 ಮತ್ತು 2)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

**PR. 618**

## ಆರ್ಥಿಕ ಸಚಿವಾಲಯ

**ವಿಷಯ:** ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ ಬಳಕೆಯಾಗದ ಅನುದಾನವನ್ನು ಹಲವಾರು ಬ್ಯಾಂಕ್‌ಗಳಲ್ಲಿ ಠೇವಣಿ ಹೂಡಿರುವ ಬಗ್ಗೆ ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆಯ ಅಧಿಕಾರಿ ತಂಡದಿಂದ ಲೆಕ್ಕಪರಿಶೋಧನೆ ಕೈಗೊಳ್ಳುವ ಬಗ್ಗೆ.

**ಓದಲಾಗಿದೆ:** 1. ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಅವರ ಪತ್ರ ಸಂಖ್ಯೆ: ಗ್ರಾಅಪ/534/ಎಎಫ್ಎನ್/2015, ದಿ:14.09.2015.

**ಪ್ರಸ್ತಾವನೆ:**

ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಅವರು ಮೇಲೆ ಓದಲಾದ ದಿ:14.09.2015ರ ಪತ್ರದಲ್ಲಿ ಕರ್ನಾಟಕ ಗ್ರಾಮೀಣ ನೀರು ಸರಬರಾಜು ಮತ್ತು ನೈರ್ಮಲ್ಯ ವಿಭಾಗ ಮತ್ತು ಕೆ.ಆರ್.ಐ.ಡಿ.ಎಲ್ ಹಾಗೂ ಇತರೆ ಅಂಗ ಸಂಸ್ಥೆಗಳಿಗೆ ಪ್ರತಿ ವರ್ಷ ಕೇಂದ್ರ ಮತ್ತು ರಾಜ್ಯ ಸರ್ಕಾರ / ಇತರ ಮೂಲಗಳಿಂದ ಬಿಡುಗಡೆಯಾಗುವ ಅನುದಾನವನ್ನು ಬ್ಯಾಂಕ್ ಖಾತೆಗಳಲ್ಲಿಟ್ಟು ನಿರ್ವಹಿಸಲಾಗುತ್ತಿದ್ದು, ಈ ರೀತಿ ವಿವಿಧ ಬ್ಯಾಂಕ್ ಖಾತೆಗಳಲ್ಲಿಟ್ಟು ನಿರ್ವಹಿಸುತ್ತಿರುವ ಅನುದಾನವನ್ನು ಹಲವಾರು ವರ್ಷಗಳಿಂದ ವೆಚ್ಚ ಭರಿಸದೇ ಇರುವುದು ಮತ್ತು ಕೆಲವು ಪ್ರಕರಣಗಳಲ್ಲಿ ವೆಚ್ಚ ಭರಿಸದೇ ಹಣಬಳಕೆ ಪ್ರಮಾಣ ಪತ್ರ ನೀಡಿರುವ ಬಗ್ಗೆ ವಿವರವಾದ ತನಿಖೆಯ ಅಗತ್ಯವಿರುವುದಾಗಿ ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ದಿ:29.07.2015ರಂದು ನಡೆದ ಸಭೆಯಲ್ಲಿ ಚರ್ಚಿಸಿ ತೆಗೆದುಕೊಂಡ ನಿರ್ಣಯದಂತೆ ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆಯ ಹಿರಿಯ ಅಧಿಕಾರಿಗಳ ಒಂದು ವಿಶೇಷ ಸಮಿತಿಯನ್ನು ರಚಿಸಿ ಸದರಿ ಸಮಿತಿಯ ತನಿಖಾ / ಪರಿಶೀಲನಾ ಅವಧಿಯಲ್ಲಿ ಅಗತ್ಯತೆಗನುಸಾರ ಪಾಲಿಸಬೇಕಾದ ನಿಬಂಧನೆಗಳು / ಜರುಗಿಸಬೇಕಾದ ಕ್ರಮಗಳ ಕುರಿತಂತೆ ವಿವರವಾದ ಲೆಕ್ಕಪರಿಶೋಧನೆ, ಲೆಕ್ಕ ತನಿಖೆ ಕೈಗೊಳ್ಳುವಂತೆ ಕೋರಿದ್ದಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 288 ರಾಲೆಪ 2015, ಬೆಂಗಳೂರು, ದಿನಾಂಕ:01.10.2015.**

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯ ಕರ್ನಾಟಕ ಗ್ರಾಮೀಣ ನೀರು ಸರಬರಾಜು ಮತ್ತು ನೈರ್ಮಲ್ಯ ವಿಭಾಗ ಹಾಗೂ ಕರ್ನಾಟಕ ಗ್ರಾಮೀಣ ಮೂಲ ಸೌಲಭ್ಯ ಅಭಿವೃದ್ಧಿ ನಿಯಮಿತ ಸಂಸ್ಥೆಗಳಲ್ಲಿ ಬಳಕೆಯಾಗದ ಅನುದಾನವನ್ನು ವೆಚ್ಚ ಭರಿಸದೇ ಹಲವಾರು ಬ್ಯಾಂಕ್‌ಗಳಲ್ಲಿಟ್ಟ ಕುರಿತು ವಿವರವಾದ ತನಿಖೆ, ಲೆಕ್ಕಪರಿಶೋಧನೆ ಕೈಗೊಳ್ಳುವ ಸಲುವಾಗಿ ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆಯ ಈ ಕೆಳಕಂಡ ಅಧಿಕಾರಿಗಳ ತಂಡವನ್ನು ರಚಿಸಲಾಗಿದೆ.

1] ಶ್ರೀ ಎನ್.ಬಿ.ಶಿವರುದ್ರಪ್ಪ,
ಅಪರ ನಿರ್ದೇಶಕರು, ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು
ಲೆಕ್ಕಪತ್ರ ಇಲಾಖೆ, ಪ್ರಧಾನ ನಿರ್ದೇಶಕರ ಕಚೇರಿ, ಬಿ.ಎಂ.ಟಿ.ಸಿ. ಕಟ್ಟಡ, ಶಾಂತಿನಗರ, ಬೆಂಗಳೂರು.

2] ಶ್ರೀ ನಾಗರಾಜ್,
ಲೆಕ್ಕಪರಿಶೋಧನಾಧಿಕಾರಿ, ಸ್ಥಳೀಯ ಲೆಕ್ಕಪರಿಶೋಧನಾ ವರ್ತುಲ,
ಜನತಾ ಬಜಾರ್, ಕೆಂಪೇಗೌಡ ರಸ್ತೆ, ಬೆಂಗಳೂರು.

3] ಶ್ರೀ ಗೋಪಾಲ,
ಲೆಕ್ಕಪರಿಶೋಧನಾಧಿಕಾರಿ, ಸ್ಥಳೀಯ ಲೆಕ್ಕಪರಿಶೋಧನಾ ವರ್ತುಲ,
ಜನತಾ ಬಜಾರ್, ಕೆಂಪೇಗೌಡ ರಸ್ತೆ, ಬೆಂಗಳೂರು.

ಕರ್ನಾಟಕ ಗ್ರಾಮೀಣ ನೀರು ಸರಬರಾಜು ಮತ್ತು ನೈರ್ಮಲ್ಯ ವಿಭಾಗ ಹಾಗೂ ಕರ್ನಾಟಕ ಗ್ರಾಮೀಣ ಮೂಲ ಸೌಲಭ್ಯ ಅಭಿವೃದ್ಧಿ ನಿಯಮಿತ ಸಂಸ್ಥೆಯಲ್ಲಿನ ಈ ಕೆಳಕಂಡ ಪರಿಶೀಲನಾಂಶಗಳ ಕುರಿತು ಆಡಿಟ್ ತನಿಖೆ ಕೈಗೊಳ್ಳುವುದು.

**I) To Audit account of the Rural Water Supply(RWS) scheme in RDPR Department since inception of the scheme. This would include regular direct releases under RWS as well as from other schemes.**

**II) To verify the liability, loss of interest / loss of opportunity, possibility of submission of false utilization certificate indiscipline in fiscal management resulting in serious problems due to the situation in which re-appropriation of financial accounts due to indiscipline in fiscal management and procedural irregularity.**

1. **ಸಂಬಂಧಿಸಿದ ಯೋಜನೆಯ ಮಾರ್ಗಸೂಚಿಯಂತೆ ಬ್ಯಾಂಕ್ ಖಾತೆ ತೆರೆದು ನಿರ್ವಹಿಸಿರುವ ಬಗ್ಗೆ:** ಕೇಂದ್ರ ಹಾಗೂ ರಾಜ್ಯ ಸರ್ಕಾರವು ಆಯಾ ಆಯೋಗಗಳಿಗೆ ಸಂಬಂಧಿಸಿದಂತೆ ರೂಪಿಸಲಾದ ಮಾರ್ಗಸೂಚಿಯಂತೆ ಬಿಡುಗಡೆಯಾದ ಅನುದಾನವನ್ನು ಏಕ ಬ್ಯಾಂಕ್ ಖಾತೆಯಲ್ಲಿಟ್ಟು ನಿರ್ವಹಿಸಿರುವುದು.
2. **ಪ್ರಸ್ತಾಪಿತ ಬ್ಯಾಂಕ್ ಖಾತೆ ನಿರ್ವಹಣೆ ಕುರಿತಂತೆ ಸಂಬಂಧಿಸಿದ ದಾಖಲಾತಿಗಳನ್ನು ನಿರ್ವಹಿಸಿರುವ ಬಗ್ಗೆ:** ಕೇಂದ್ರ ಹಾಗೂ ರಾಜ್ಯ ಸರ್ಕಾರಗಳಿಂದ ಅನುಮೋದಿತವಾಗಿರುವ ಯೋಜನೆಗಳ ಮಾರ್ಗಸೂಚಿಯನ್ವಯ ಪ್ರಸ್ತಾಪಿತ ಬ್ಯಾಂಕ್ ಖಾತೆಗಳನ್ನು ತೆರೆದು, ಕರ್ನಾಟಕ ಆರ್ಥಿಕ ಸಂಹಿತೆಯನುಸಾರ ಅದಕ್ಕೆ ಸಂಬಂಧಿಸಿದ ಈ ಕೆಳಕಂಡ ದಾಖಲಾತಿಗಳನ್ನು ನಿರ್ವಹಿಸಿರುವುದು.
3. ನಗದು ಪುಸ್ತಕ ನಿರ್ವಹಣೆ ಕುರಿತಂತೆ ಅನುದಾನಗಳ ಸ್ವೀಕೃತಿ ಮತ್ತು ಬಿಡುಗಡೆ ಪುಸ್ತಕ ಪರಿಶೀಲನೆ.
4. ಹೆಚ್ಚುವರಿ ವಸೂಲಾತಿಯ ಬಗ್ಗೆ ವಹಿ ನಿರ್ವಹಣೆ.
5. ಬ್ಯಾಂಕ್ ನಿಶ್ಚಿತ ಠೇವಣಿ ಹೂಡಿರುವ ಬಗ್ಗೆ ಹಾಗೂ ಗಳಿಸಿದ ಬಡ್ಡಿಯ ವಹಿ ನಿರ್ವಹಣೆ.
6. **ಈ ರೀತಿ ಬ್ಯಾಂಕ್ ಖಾತೆಗಳಲ್ಲಿಟ್ಟು ನಿರ್ವಹಿಸುತ್ತಿರುವ ಅನುದಾನವನ್ನು ಉಳಿತಾಯ ಖಾತೆ, ಚಾಲ್ತಿ ಖಾತೆ, ನಿಶ್ಚಿತ ಠೇವಣಿ ಅಥವಾ ಇತರೆ ರೀತಿಯಲ್ಲಿ ಹೂಡಿಗೆ ಮಾಡಲಾಗಿರುವ ಬಗ್ಗೆ:** ಕೇಂದ್ರ ಹಾಗೂ ರಾಜ್ಯ ಸರ್ಕಾರದ ಅನುದಾನವನ್ನು ಹಾಗೂ ಇತರೆ ಮೂಲಗಳಿಂದ ಬಿಡುಗಡೆಯಾದ ಅನುದಾನವನ್ನು ಬಳಸದೆ ಬ್ಯಾಂಕ್‌ಗಳಲ್ಲಿ / ಚಾಲ್ತಿ ಖಾತೆಯಲ್ಲಿ / ನಿಶ್ಚಿತ ಠೇವಣಿ ಅಥವಾ ಇತರೆ ರೀತಿಯಲ್ಲಿ ಹೂಡಿಕೆ ಮಾಡಿರುವುದರ ಬಗ್ಗೆ ಮತ್ತು ಸಂಬಂಧಪಟ್ಟ ಪ್ರಾಧಿಕಾರದಿಂದ ಪೂರ್ವಾನುಮತಿಯನ್ನು ಪಡೆದಿರುವುದು.
7. **ಕೆಲವು ಯೋಜನೆಗಳು ಉದಾ:** ಕೇಂದ್ರ ಪುರಸ್ಕೃತ ರಾಷ್ಟ್ರೀಯ ಗ್ರಾಮೀಣ ಕುಡಿಯುವ ನೀರಿನ ಯೋಜನೆ (NRDWP) ಅನುದಾನವನ್ನು ಯೋಜನೆಯ ಮಾರ್ಗಸೂಚಿಯಂತೆ ಒಂದು ಬ್ಯಾಂಕ್ ಆಯ್ಕೆ ಮಾಡಿ ಮೂಲ ಘಟಕ ಯೋಜನೆ ಮತ್ತು ಸಪೋರ್ಟ್ ಅಕ್ಟಿವಿಟಿಗಳಿಗಾಗಿ (Programme A/c and Support Activitiy) 2 ಖಾತೆಗಳನ್ನು ತೆರೆದು ಒಡಂಬಡಿಕೆ (MOU) ಮಾಡಿಕೊಂಡಿರುವ ಬಗ್ಗೆ ಮತ್ತು ಅದರಲ್ಲಿನ ನಿಬಂಧನೆಗಳನ್ನು ಜಾರಿಗೊಳಿಸಿರುವ ಬಗ್ಗೆ.
8. ಕೇಂದ್ರ ಹಾಗೂ ರಾಜ್ಯ ಸರ್ಕಾರದಿಂದ ಆಯಾಯ ಯೋಜನೆಗೆ ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ / ಉಚಿತ ಮಾರ್ಗದಲ್ಲಿ ಅನುದಾನ ಬಿಡುಗಡೆ ಆಗಿರುವ ಬಗ್ಗೆ ಹಾಗೂ ಬಿಡುಗಡೆ ಮಾಡಲಾದ ಅನುದಾನವನ್ನು ಆಯಾ ಯೋಜನೆಗೆ ಸಂಬಂಧಿಸಿದಂತೆ ಅನುಮೋದಿತ ಕ್ರಿಯಾ ಯೋಜನೆಗೆ ಅನುಸಾರವಾಗಿ ಭೌತಿಕ ಮತ್ತು ಆರ್ಥಿಕ ವೆಚ್ಚವನ್ನು ಮಾಡಿರುವ ಬಗ್ಗೆ ನಿಖರವಾದ ಹಣ ಬಳಕೆ ಪ್ರಮಾಣ ಪತ್ರವನ್ನು ನೀಡಿರುವುದು.
9. ವೆಚ್ಚವನ್ನು ನಿಗಧಿತ ಯೋಜನೆಗೆ ಭರಿಸಲಾಗಿದೆಯೆ ಮತ್ತು ನಿಗಧಿತ ಅವಧಿಯೊಳಗೇ ಭರಿಸಲಾಗಿರುವ ಬಗ್ಗೆ.
10. ಇಲಾಖಾ ಲೆಕ್ಕಗಳನ್ನು ಬ್ಯಾಂಕ್ ಪಟ್ಟಿಯ ಜೊತೆ ಸಮನ್ವಯಗೊಳಿಸಿರುವುದನ್ನು ಖಾತರಿಪಡಿಸಿಕೊಳ್ಳುವುದು.
11. ಒಂದು ಯೋಜನೆಯ ಅನುದಾನವನ್ನು ವಿವಿಧ ಬ್ಯಾಂಕ್ ಖಾತೆಗಳಲ್ಲಿ ನಿರ್ವಹಿಸಿರುವ ಬಗ್ಗೆ.
12. ಬ್ಯಾಂಕ್‌ನಲ್ಲಿ ಹೊಂದಿರುವ ನಿಶ್ಚಿತ ಠೇವಣಿ ಕುರಿತಂತೆ ತ್ರೈಮಾಸಿಕ / ವರ್ಷಾಂತ್ಯಕ್ಕೆ ಅಂತಿಮ ಶಿಲ್ಕಿನ ಬಗ್ಗೆ ದೃಢೀಕರಣ ಪತ್ರ (ಬ್ಯಾಂಕ್ ಕನ್‌ಫರ್‌ಮೇಶನ್ ಪತ್ರ).
13. ಯೋಜನೆಯ ಅನುದಾನವನ್ನು ವೈಯಕ್ತಿಕ ಬ್ಯಾಂಕ್ ಖಾತೆಗಳಲ್ಲಿ ಇಟ್ಟಿರುವ ಬಗ್ಗೆ.
14. ಬ್ಯಾಂಕ್ ಖಾತೆಯಲ್ಲಿಟ್ಟ ಅನುದಾನಕ್ಕೆ ಬ್ಯಾಂಕ್ ನೀಡಿರುವ ಬಡ್ಡಿಯ ನಿಖರತೆ ಬಗ್ಗೆ.
15. ಅನುದಾನ ದುರ್ಬಳಕೆ ಬಗ್ಗೆ.
16. ಬ್ಯಾಂಕ್ ಖಾತೆ ನಿರ್ವಹಣೆ ಕುರಿತಂತೆ ಸಂಬಂಧಪಟ್ಟ ಇತರೆ ವಿಷಯಗಳು.
17. ಸಂಬಂಧಪಟ್ಟ ಇತರೆ ವಿಷಯಗಳು.

ತಂಡಕ್ಕೆ ಎಲ್ಲಾ ಸಹಕಾರವನ್ನು ನೀಡಲು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ಯ ಇಲಾಖೆ, ಕೆ.ಆರ್.ಐ.ಡಿ.ಎಲ್ ಹಾಗೂ ಕೆ.ಆರ್.ಡಬ್ಲ್ಯೂಎಸ್.ಎ.ಸಂಸ್ಥೆಗಳು ಕ್ರಮ ಕೈಗೊಳ್ಳುವುದು ಹಾಗೂ ಅಗತ್ಯವಾದ ಕಾಗದ ಪತ್ರಗಳನ್ನು ಹಾಜರುಪಡಿಸುವುದು.

ತಂಡವು ಮೇಲಿನ ಪರಿಶೀಲನಾಂಶಗಳ ಬಗ್ಗೆ ಆಡಿಟ್ ತನಿಖೆಯನ್ನು ಮಾಡಿ ದಿನಾಂಕ:31.10.2015 ರೊಳಗೆ ವರದಿಯನ್ನು ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಲಕ್ಷ್ಮಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

**PR. 615**

## ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಸಚಿವಾಲಯ

**ವಿಷಯ:–** ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಇಲಾಖೆಯ ವಾರ್ತಾ ಶಾಖೆಯ ಅಧೀನ ಇಲಾಖೆಯಾದ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಗೆ ಸಂಬಂಧಿಸಿದಂತೆ ಇಲಾಖಾ ಮುಂಬಡ್ತಿ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:–**

(1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:64:ಸೆನೆನಿ:1996, ದಿ:06/12/1996.

(2) ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ:04:ಸ್ಥಿಮುರ:2010, ದಿ:13/01/2010.

(3) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ:75:ಸೆನೆನಿ:2010, ದಿ:19/05/2010.

(4) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ:18:ಸೇನೆನಿ:2011, ದಿ:29/08/2011.

(5) ನಿರ್ದೇಶಕರು, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಇವರ ಪತ್ರ ಸಂಖ್ಯೆ: ವಾಸಾಸಂ/ಇಎಪಿ(ಜಿ)/ಇ1/2015–16/10958, ದಿ:02/03–09–2015.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರಾಜ್ಯ ಸಿವಿಲ್ ಸೇವೆಯ ಹುದ್ದೆಗಳಿಗೆ ಜೇಷ್ಠತೆ ಮತ್ತು ಅರ್ಹತೆಯ ಆಧಾರದ ಮೇಲೆ ರಾಜ್ಯ ಸಿವಿಲ್ ಸೇವೆಯ ಹುದ್ದೆಗಳಿಗೆ ಮುಂಬಡ್ತಿ ನೀಡುವ ಉದ್ದೇಶಗಳಿಗಾಗಿ ಇಲಾಖಾ ಮುಂಬಡ್ತಿ ಸಮಿತಿಗಳನ್ನು ರಚಿಸುವ ಬಗ್ಗೆ ಮಾರ್ಗಸೂಚಿಗಳನ್ನು ನೀಡಿದೆ. ಅದರಂತೆ, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಅಧೀನ ಇಲಾಖೆಗಳಾದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ವಾರ್ತಾ ಇಲಾಖೆ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಗೆಜೆಟಿಯರ್ ಇಲಾಖೆ, ಪತ್ರಾಗಾರ ಹಾಗೂ ಪ್ರವಾಸೋದ್ಯಮ ಇಲಾಖೆಗಳಿಗೆ ಸಂಬಂಧಿಸಿದಂತೆ ಗ್ರೂಪ್–ಎ ಕಿರಿಯ ಶ್ರೇಣಿಯಿಂದ ಗ್ರೂಪ್–ಎ ಹಿರಿಯ ಶ್ರೇಣಿಗೆ ಬಡ್ತಿ ಹಾಗೂ ಗ್ರೂಪ್–ಸಿ ಯಿಂದ ಗ್ರೂಪ್–ಬಿ ಹಾಗೂ ಗ್ರೂಪ್–ಬಿ ಸಮೂಹದಿಂದ ಗ್ರೂಪ್–ಎ ಕಿರಿಯ ಶ್ರೇಣಿಗೆ ಬಡ್ತಿ ನೀಡಲು ಸಮಿತಿಯನ್ನು ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದನ್ವಯ ರಚಿಸಲಾಗಿದೆ.

ಮುಂದುವರೆದಂತೆ, ಮೇಲೆ ಓದಲಾದ (3)ರ ಸರ್ಕಾರಿ ಆದೇಶವನ್ನು ಭಾಗಶ: ಮಾರ್ಪಡಿಸಿ ಜೇಷ್ಠತೆ ಹಾಗೂ ಅರ್ಹತೆಯ ಆಧಾರದ ಮೇಲೆ ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ ಮುಂಬಡ್ತಿಯನ್ನು ಪರಿಗಣಿಸುವ ಉದ್ದೇಶಕ್ಕಾಗಿ ರಚಿಸಲಾದ ಇಲಾಖಾ ಮುಂಬಡ್ತಿ ಸಮಿತಿಗಳಲ್ಲಿ ಅದೇ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡಕ್ಕೆ ಸೇರಿದ ಒಬ್ಬ ಅಧಿಕಾರಿಯನ್ನು ಸದಸ್ಯರನ್ನಾಗಿ ಸಂಬಂಧಿತ ಇಲಾಖಾ ಮುಖ್ಯಸ್ಥರು ನೇಮಕ ಮಾಡತಕ್ಕದೆಂದು, ಅಂತಹ ಅಧಿಕಾರಿಯು ಯಾವ ಹುದ್ದೆಗೆ ಮುಂಬಡ್ತಿಯನ್ನು ಪರಿಗಣಿಸಲಾಗುತ್ತದೆಯೋ ಆ ಹುದ್ದೆಗೆ ಸಮಾನವಾದ ಹುದ್ದೆಯನ್ನು ಅಥವಾ ಆ ಹುದ್ದೆಗಿಂತ ಮೇಲ್ಮಟ್ಟದ ಹುದ್ದೆಯನ್ನು ಧಾರಣ ಮಾಡಿರಬೇಕೆಂದು ಹಾಗೂ ಷರತ್ತನ್ನು ಪೂರೈಸುವ ಅಧಿಕಾರಿಯು ಅದೇ ಇಲಾಖೆಯಲ್ಲಿರದಿದ್ದಲ್ಲಿ, ಈ ಷರತ್ತನ್ನು ಪೂರೈಸುವ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡಕ್ಕೆ ಸೇರಿದ ಅಧಿಕಾರಿಯ ಹೆಸರನ್ನು ಸೂಚಿಸುವಂತೆ ಆಡಳಿತ ಇಲಾಖೆಗಳು ಪ್ರಧಾನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ, ಅವರನ್ನು ಕೋರತಕ್ಕದೆಂದು ಸೂಚಿಸಲಾಗಿದ್ದು, ಇದೇ ವಿಧಾನವನ್ನು ಆಯ್ಕೆ ಮೂಲಕ ಮುಂಬಡ್ತಿ ನೀಡಲು ರಚಿಸಲಾಗಿರುವ ಇಲಾಖಾ ಮುಂಬಡ್ತಿ ಸಮಿತಿಗಳಿಗೂ ಅನ್ವಯಿಸತಕ್ಕದ್ದೆಂದು ಮೇಲೆ ಓದಲಾದ (4)ರ ಸರ್ಕಾರಿ ಆದೇಶದಲ್ಲಿ ತಿಳಿಸಲಾಗಿರುತ್ತದೆ. ನಿರ್ದೇಶಕರು, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಇವರು ಮೇಲೆ (5)ರಲ್ಲಿ ಓದಲಾದ ಪತ್ರದಲ್ಲಿ ಸದರಿ ಇಲಾಖಾ ಮುಂಬಡ್ತಿ ಸಮಿತಿಯಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿದ ಅಧಿಕಾರಿಯನ್ನು ಸದಸ್ಯರನ್ನಾಗಿ ನೇಮಕ ಮಾಡಲು ಹಾಲಿ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಇಲಾಖಾ ಅಧಿಕಾರಿಗಳ ವಿವರವನ್ನು ಈ ಕೆಳಕಂಡಂತೆ ಸಲ್ಲಿಸಿರುತ್ತಾರೆ:

(1) ಶ್ರೀ.ಎಂ.ರವಿಕುಮಾರ್, ಜಂಟಿ ನಿರ್ದೇಶಕರು (ಪಜಾ)

(2) ಶ್ರೀ.ಪಿ.ಎನ್.ಗುರುಮೂರ್ತಿ, ಉಪ ನಿರ್ದೇಶಕರು (ಪಜಾ)

(3) ಶ್ರೀಮತಿ ಆರ್.ಸರಸ್ವತಿ, ಉಪ ನಿರ್ದೇಶಕರು (ಪಪಂ)

ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಗೆ ಸಂಬಂಧಿಸಿದಂತೆ ಇಲಾಖಾ ಮುಂಬಡ್ತಿ ಸಮಿತಿಗೆ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿದ ಅಧಿಕಾರಿಯನ್ನು ಸದಸ್ಯರನ್ನಾಗಿ ನೇಮಕ ಮಾಡುವ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಸಂವಾ:60:ವಾಪ್ರಸಿ:2015, ಬೆಂಗಳೂರು, ದಿನಾಂಕ:29–09–2015**.

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ.ಎಂ.ರವಿಕುಮಾರ್, ಜಂಟಿ ನಿರ್ದೇಶಕರು, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಇಲಾಖೆಯ ಅಧೀನ ಇಲಾಖೆಯಾದ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಗೆ ಸಂಬಂಧಿಸಿದ ಇಲಾಖಾ ಮುಂಬಡ್ತಿ ಸಮಿತಿಯಲ್ಲಿ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಸದಸ್ಯರನ್ನಾಗಿ ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ.ಮಂಜುಳ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ, (ವಾರ್ತಾ ಶಾಖೆ)

**PR. 604**

**SC.100**

## ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಸಚಿವಾಲಯ

**ಸಂಖ್ಯೆ:ಕಸಂವಾ:64:ವಾಪ್ರಜಾ:2014, ಬೆಂಗಳೂರು, ದಿನಾಂಕ:15-09-2015**

**ಸೇರ್ಪಡೆ**

ಸರ್ಕಾರದ ಆದೇಶ ಸಂಖ್ಯೆ:ಕಸಂವಾಪ್ರ 69 ವಾಪ್ರಜಾ 2013, ದಿ:10.09.2014ರಲ್ಲಿ, ಜಾಹೀರಾತು ನೀತಿ-2013ಕ್ಕೆ ಜಾರಿಗೆ ತಂದಿರುವ ನಿಯಮಗಳ ಅಧ್ಯಾಯ-6ರ ಕ್ರಮ ಸಂಖ್ಯೆ 23 ಮತ್ತು 28ಕ್ಕೆ ಈ ಕೆಳಗಿನಂತೆ ಸೇರ್ಪಡೆ ಮಾಡಿ ತಿದ್ದುಪಡಿ ತರಲಾಗಿದೆ.

| ಪ್ರಸ್ತುತ ಇರುವ ನಿಯಮಗಳು | ಸೇರ್ಪಡಿಸಿ ಓದಿಕೊಳ್ಳಬೇಕಾದ ನಿಯಮಗಳು |
|---|---|
| **ಕ್ರಮ ಸಂಖ್ಯೆ:23**<br>ರಾಜ್ಯ ಮಟ್ಟದ ವಿಶೇಷ ಸಭೆ ಸಮಾರಂಭಗಳು, ಜಯಂತಿ ಆಚರಣೆಗಳು ಸರ್ಕಾರದ ವಾರ್ಷಿಕ ದಿನಾಚರಣೆ, ಪ್ರಮುಖ ಯೋಜನೆಗಳ ಲೋಕಾರ್ಪಣೆ ಇತ್ಯಾದಿ ಜಾಹೀರಾತುಗಳನ್ನು ಸರ್ಕಾರದ ಸೂಚನೆಯ ಮೇರೆಗೆ ಮಾಧ್ಯಮ ಪಟ್ಟಿಯಲ್ಲಿರುವ ರಾಜ್ಯಮಟ್ಟದ ದಿನಪತ್ರಿಕೆಗಳಿಗೆ ಹಾಗೂ 20,000 ಮತ್ತು ಹೆಚ್ಚು ಪ್ರತಿಗಳ ಪ್ರಸಾರ ಸಂಖ್ಯೆ ಹೊಂದಿರುವ ಪ್ರಾದೇಶಿಕ ದಿನ ಪತ್ರಿಕೆಗಳಿಗೆ ಆವರ್ತನೀಯ ವಿಧಾನವನ್ನು ಅನುಸರಿಸಿ ಬಿಡುಗಡೆ ಮಾಡಬೇಕು. ಈ ಕಾರ್ಯಕ್ರಮಗಳು ಜರುಗುವ ವ್ಯಾಪ್ತಿಯಲ್ಲಿನ ಪ್ರಾದೇಶಿಕ ದಿನ ಪತ್ರಿಕೆಗಳು ಮತ್ತು ಜಿಲ್ಲಾಮಟ್ಟದ ದಿನ ಪತ್ರಿಕೆಗಳು ಸಹ ಸಂದರ್ಭಾನುಸಾರ ವಾರ್ತಾ ಇಲಾಖೆಯ ನಿರ್ದೇಶಕರು ಜಾಹೀರಾತು ಬಿಡುಗಡೆ ಮಾಡಲು ಅಧಿಕಾರ ಹೊಂದಿರುತ್ತಾರೆ. | ರಾಜ್ಯ ಮಟ್ಟದ ವಿಶೇಷ ಸಭೆ ಸಮಾರಂಭಗಳು, ಜಯಂತಿ ಆಚರಣೆಗಳು ಸರ್ಕಾರದ ವಾರ್ಷಿಕ ದಿನಾಚರಣೆ, ಪ್ರಮುಖ ಯೋಜನೆಗಳ ಲೋಕಾರ್ಪಣೆ ಇತ್ಯಾದಿ ಜಾಹೀರಾತುಗಳನ್ನು ಸರ್ಕಾರದ ಸೂಚನೆಯ ಮೇರೆಗೆ ಮಾಧ್ಯಮ ಪಟ್ಟಿಯಲ್ಲಿರುವ ಪರಿಶಿಷ್ಠ ಜಾತಿ/ ಪರಿಶಿಷ್ಠ ಪಂಗಡದವರ ಮಾಲೀಕತ್ವ ಮತ್ತು ಸಂಪಾದಕತ್ವದಲ್ಲಿ ಪ್ರಕಟವಾಗಿ 10,000 ಮತ್ತು ಹೆಚ್ಚು ಪ್ರತಿಗಳ ಪ್ರಸಾರ ಸಂಖ್ಯೆ ಹೊಂದಿರುವ ಪ್ರಾದೇಶಿಕ ದಿನ ಪತ್ರಿಕೆಗಳಿಗೆ ಆವರ್ತನೀಯ ವಿಧಾನವನ್ನು ಅನುಸರಿಸಿ ಬಿಡುಗಡೆ ಮಾಡಲು ವಾರ್ತಾ ಇಲಾಖೆಯ ನಿರ್ದೇಶಕರು ಅಧಿಕಾರ ಹೊಂದಿರುತ್ತಾರೆ. |
| **ಕ್ರಮ ಸಂಖ್ಯೆ:28**<br>ವಾರ್ತಾ ಇಲಾಖೆಯ ಮಾಧ್ಯಮ ಪಟ್ಟಿಯಲ್ಲಿರುವ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರ ಮಾಲೀಕತ್ವದ ಜಿಲ್ಲಾ ಮತ್ತು ಪ್ರಾದೇಶಿಕ ಪತ್ರಿಕೆಗಳು ಹಾಗೂ ನಿಯತಕಾಲಿಕೆಗಳಿಗೆ ಸರ್ಕಾರದ ಪ್ರೋತ್ಸಾಹ ರೂಪದಲ್ಲಿ ಆಯಾ ಪತ್ರಿಕೆಗಳ ಅಂಗೀಕೃತ ದರದಲ್ಲಿ ಪ್ರತಿ ತಿಂಗಳು ಕೆಳಕಂಡ ಷರತ್ತು ಮತ್ತು ವಿಧಾನದಂತೆ ಜಾಹೀರಾತು ಬಿಡುಗಡೆ ಮಾಡಬೇಕು.<br>1.ಪತ್ರಿಕೆಯ ಮಾಲೀಕತ್ವ ಮತ್ತು ಸಂಪಾದಕತ್ವವನ್ನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರು ಹೊಂದಿರಬೇಕು. ಈ ಬಗ್ಗೆ ಅಧಿಕೃತ ಪ್ರಾಧಿಕಾರದಿಂದ ಜಾತಿ ಪ್ರಮಾಣಪತ್ರ ಪಡೆದು ಸಲ್ಲಿಸಬೇಕು.<br>2.ದಿನಪತ್ರಿಕೆಗಳಿಗೆ ಪ್ರತಿ ತಿಂಗಳು ಕನಿಷ್ಠ 1 ಪುಟ ಜಾಹೀರಾತು<br>3.ವಾರಪತ್ರಿಕೆಗಳಿಗೆ ಪ್ರತಿ ತಿಂಗಳು ಕನಿಷ್ಠ 1 ಪುಟ ಜಾಹೀರಾತು.<br>4.ಪಾಕ್ಷಿಕ ಪತ್ರಿಕೆಗಳಿಗೆ ಪ್ರತಿ ತಿಂಗಳು ಕನಿಷ್ಠ 1 ಪುಟ ಜಾಹೀರಾತು.<br>5.ಮಾಸ ಪತ್ರಿಕೆಗಳಿಗೆ ಪ್ರತಿ ತಿಂಗಳು ಕನಿಷ್ಠ 1 ಪುಟ ಜಾಹೀರಾತು.<br>6.ದ್ವೈ ಮಾಸಿಕ ಪತ್ರಿಕೆಗಳಿಗೆ ಪ್ರತಿ ತಿಂಗಳು ಕನಿಷ್ಠ 1 ಪುಟ ಜಾಹೀರಾತು.<br>7.ತ್ರೈ ಮಾಸಿಕ ಪತ್ರಿಕೆಗಳಿಗೆ ಪ್ರತಿ ತಿಂಗಳು ಕನಿಷ್ಠ 1 ಪುಟ ಜಾಹೀರಾತು. | ಪತ್ರಿಕಾ ಕ್ಷೇತ್ರದಲ್ಲಿ ದುಡಿಯುತ್ತಿರುವ ಪರಿಶಿಷ್ಟ ಜಾತಿ ಹಾಗೂ ಪಂಗಡದವರ ಮಾಲೀಕತ್ವ ಹಾಗೂ ಸಂಪಾದಕತ್ವದಲ್ಲಿ ಪ್ರಕಟವಾಗುವ ಪತ್ರಿಕೆಗಳಿಗೆ ಸಹಾಯವಾಗುವಂತೆ ಪತ್ರಿಕೆಗಳು ಆರ್‌ಎನ್‌ಐ ಪ್ರಮಾಣ ಪತ್ರ ಪಡೆದ ದಿನಾಂಕದಿಂದ ಸತತವಾಗಿ 10 ವರ್ಷಗಳ ಪ್ರಕಟಣಾ ಅವಧಿಯನ್ನು ಪೂರೈಸಿರುವ ಈ ಎರಡೂ ವರ್ಗಗಳ ಪತ್ರಿಕೆಗಳಿಗೆ ಹೆಚ್ಚುವರಿಯಾಗಿ ಪ್ರತಿ ತಿಂಗಳು ದಿನಪತ್ರಿಕೆಗಳಿಗೆ ಅರ್ಧಪುಟ ಮತ್ತು ಇತರ ನಿಯತಕಾಲಿಕ ಪತ್ರಿಕೆಗಳಿಗೆ ಪ್ರತಿ ಸಂಚಿಕೆಗೆ ಅರ್ಧಪುಟ ಜಾಹೀರಾತು ಬಿಡುಗಡೆ ಮಾಡಲು ನಿರ್ದೇಶಕರು ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಇವರು ಅಧಿಕಾರ ಹೊಂದಿರುತ್ತಾರೆ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ.ಮಂಜುಳ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ, (ವಾರ್ತಾ ಶಾಖೆ)

PR. 601

## ಕಂದಾಯ ಸಚಿವಾಲಯ

**ವಿಷಯ:** ಹಾವೇರಿ ಜಿಲ್ಲೆ, ಹಾವೇರಿ ತಾಲ್ಲೂಕು, ಕುಳೇನೂರು ಗ್ರಾಮದ ರಿ.ಸ.ನಂ.92/2ಅ ರಲ್ಲಿ 50-00ಎಕರೆ ಸರ್ಕಾರಿ ಜಮೀನನ್ನು ಸ್ಪೈಸ್ ಪಾರ್ಕ್ ಸ್ಥಾಪಿಸಲು ಸ್ಪೈಸ್ ಮಂಡಳಿ, ವಾಣಿಜ್ಯ ಮತ್ತು ಕೈಗಾರಿಕೆ ಮಂತ್ರಾಲಯ, ಭಾರತ ಸರ್ಕಾರ ರವರಿಗೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ:** ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ರವರ ಪತ್ರ ಸಂಖ್ಯೆ: ಪ್ರಾಆಬೆ/ಭೂಮಿ/4ಎಲ್‌ಜಿಎಲ್/04/2015-16 ದಿನಾಂಕ:30-05-2015.

**ಪ್ರಸ್ತಾವನೆ:**

ಮೇಲೆ ಓದಲಾದಂತೆ ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಇವರ ಪತ್ರ ದಿನಾಂಕ:30–05–2015ರ ಪತ್ರದಲ್ಲಿ ಹಾವೇರಿ ಜಿಲ್ಲೆ, ಕುಳೇನೂರು ಗ್ರಾಮದ ರಿ.ಸ.ನಂ.92/2ಅ ರಲ್ಲಿ 50–00ಎಕರೆ ಸರ್ಕಾರಿ ಜಮೀನನ್ನು ಸ್ಪೈಸ್ ಪಾರ್ಕ್ ಸ್ಥಾಪಿಸಲು ಸ್ಪೈಸ್ ಮಂಡಳಿ, ವಾಣಿಜ್ಯ ಮತ್ತು ಕೈಗಾರಿಕೆ ಮಂತ್ರಾಲಯ, ಭಾರತ ಸರ್ಕಾರ ರವರಿಗೆ ಮಂಜೂರು ಮಾಡುವ ಬಗ್ಗೆ ಪ್ರಸ್ತಾಪಿಸಿರುತ್ತಾರೆ. ಮುಂದುವರಿದು ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ ಇವರು ಸಲ್ಲಿಸಿರುವ ವರದಿಯಂತೆ ಹಾವೇರಿ ಜಿಲ್ಲೆ, ಹಾವೇರಿ ತಾಲ್ಲೂಕು, ಕುಳೇನೂರು ಗ್ರಾಮದ ರಿ.ಸ.ನಂ.92/2ಅ ರಲ್ಲಿ ಒಟ್ಟು 135–12 ಎಕರೆ ಸರ್ಕಾರಿ ಪಡಾ ಜಮೀನು ಇದ್ದು, ಈ ಜಮೀನಿನ ಪೈಕಿ 21–27ಎಕರೆ ಜಮೀನನ್ನು ಇತರೆ ಉದ್ದೇಶಗಳಿಗಾಗಿ ಈಗಾಗಲೇ ಮಂಜೂರು ಮಾಡಲಾಗಿದ್ದು, ಬಾಕಿ ಉಳಿದ 113–25ಎಕರೆ ಜಮೀನಿನ ಪೈಕಿ 50–00ಎಕರೆ ಸರ್ಕಾರಿ ಜಮೀನನ್ನು **"ಸ್ಪೈಸ್ ಪಾರ್ಕ್"** ಸ್ಥಾಪಿಸಲು ಸ್ಪೈಸ್ ಮಂಡಳಿ, ವಾಣಿಜ್ಯ ಮತ್ತು ಕೈಗಾರಿಕೆ ಮಂತ್ರಾಲಯ, ಭಾರತ ಸರ್ಕಾರ ಇವರಿಗೆ ಮಂಜೂರು ಮಾಡುವಂತೆ ಕೋರಿರುತ್ತಾರೆ. ಪ್ರಸ್ತಾಪಿತ ಜಮೀನಿಗೆ ಸಂಬಂಧಿಸಿದಂತೆ, ನಮೂನೆ 50 ಮತ್ತು ನಮೂನೆ 53 ಅರ್ಜಿಗಳು ಬಾಕಿ ಇರುವುದಿಲ್ಲವೆಂದು ಸದರಿ ಜಮೀನು ಅತಿಕ್ರಮಣದಿಂದ ಮುಕ್ತವಾಗಿದೆಯೆಂದು ಹಾಗೂ ಗ್ರಾಮ ಪಂಚಾಯಿತಿ ಕುಳೇನೂರು, ಇವರು ನಿರಾಕ್ಷೇಪಣಾ ಪತ್ರ ಸಲ್ಲಿಸಿರುತ್ತಾರೆಂದು, ಮತ್ತು ಆರೋಗ್ಯ ಇಲಾಖೆಯ ಅಧಿಕಾರಿಗಳು ಉದ್ದೇಶಿತ ಜಮೀನು ಸ್ಪೈಸ್ ಪಾರ್ಕ್ ಸ್ಥಾಪಿಸಲು ಯೋಗ್ಯವಾಗಿರುವುದೆಂದು ವರದಿ ಮಾಡಿರುತ್ತಾರೆ.

ಮುಂದುವರಿದು ಉದ್ದೇಶಿತ ಜಮೀನು ಸರ್ಕಾರಿ ಬಿ ಖರಾಬು ಜಮೀನಾಗಿರುವುದರಿಂದ ನಿಯಮಾನುಸಾರ ಇಂತಹ ಜಮೀನುಗಳು ನಿರ್ದಿಷ್ಟ ಉದ್ದೇಶಗಳಿಗಾಗಿ ಮೀಸಲಿರಿಸಿದ ಜಮೀನುಗಳಾಗಿದ್ದು, ಅವುಗಳು ಖರಾಬು ಲಕ್ಷಣಗಳನ್ನು ಕಳೆದುಕೊಂಡಿದ್ದು, ಸಾರ್ವಜನಿಕ ಉದ್ದೇಶಕ್ಕಾಗಿ ಬಳಸಲ್ಪಡದೆ ಇರುವ ಸಂದರ್ಭಗಳಲ್ಲಿ ಅವುಗಳನ್ನು ಸಾರ್ವಜನಿಕ ಹಕ್ಕಿನಿಂದ ವಿಹಿತಗೊಳಿಸಲು ನಿಯಮಗಳಲ್ಲಿ ಅವಕಾಶವಿದೆಯೆಂದು ವರದಿ ಮಾಡಿರುತ್ತಾರೆ.

ಮುಂದುವರಿದು ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ ಇವರ ಅಧ್ಯಕ್ಷತೆಯಲ್ಲಿ ದಿ:26–11–2014ರಂದು ಜರುಗಿದ ಜಿಲ್ಲಾ ಮಟ್ಟದ ಕೈಗಾರಿಕಾ ಏಕಗವಾಕ್ಷಿ ಸಮಿತಿ ಸಭೆಯ ನಡವಳಿಗಳಲ್ಲಿ, ಕೇಂದ್ರ ಸರ್ಕಾರದ ಸ್ಪೈಸ್ ಬೋರ್ಡ್ ನವರು ಕೈಗಾರಿಕಾ ಉದ್ದೇಶಕ್ಕಾಗಿ ಸ್ಪೈಸ್ ಪಾರ್ಕ್ ಸ್ಥಾಪಿಸಲು 50 ರಿಂದ 100 ಎಕರೆ ಜಮೀನನ್ನು ಉಚಿತವಾಗಿ ಒದಗಿಸುವಂತೆ ಕೋರಿರುತ್ತಾರೆಂದು ತಿಳಿಸಲಾಗಿದೆ. ಹಾಗೂ ಉದ್ದೇಶಿತ ಸ್ಪೈಸ್ ಪಾರ್ಕ್‌ಕಿನಲ್ಲಿ ಮೆಣಸಿನಕಾಯಿ ಮತ್ತು ಅದರ ಉತ್ಪನ್ನಗಳನ್ನು ಉತ್ಪಾದಿಸುವ ಘಟಕಗಳಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸಲು ರೂ.40 ಕೋಟಿ ಯೋಜನಾ ವೆಚ್ಚದಲ್ಲಿ ಸ್ಥಾಪಿಸಲು ಉದ್ದೇಶಿಸಲಾಗಿದೆಯೆಂದು ತಿಳಿಸಲಾಗಿದೆ.

ಮುಂದುವರಿದು ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಹಾವೇರಿ ಇವರು ದಿನಾಂಕ:21–11–2014ರ ತಮ್ಮ ಪತ್ರದಲ್ಲಿ ಹಾವೇರಿ ಜಿಲ್ಲೆಯು ಕೃಷಿ ಆಧಾರಿತ ಜಿಲ್ಲೆಯಾಗಿದ್ದು, ಮುಖ್ಯವಾಗಿ ಗೋವಿನ ಜೋಳ, ಹತ್ತಿ, ಭತ್ತ, ಮೆಣಸಿನಕಾಯಿ ಹಾಗೂ ತೋಟಗಾರಿಕಾ ಬೆಳೆಗಳನ್ನು ಸದರಿ ಪ್ರದೇಶದಲ್ಲಿ ಬೆಳೆಯುತ್ತಿದ್ದು, ಆಹಾರ ಉತ್ಪನ್ನ ಘಟಕಗಳಿಗೆ ಹಾಗೂ ಉತ್ಪನ್ನಗಳ ಕೈಗಾರಿಕಾ ಸ್ಥಾಪನೆಗೆ ವಿಫುಲ ಅವಕಾಶವಿರುವುದರಿಂದ, ಕುಳೇನೂರು ಗ್ರಾಮದ ರಿ.ಸ.ನಂ.92/2ಅ ರಲ್ಲಿ 50–00ಎಕರೆ ಜಮೀನು ಸ್ಪೈಸ್ ಪಾರ್ಕ್ ಸ್ಥಾಪನೆಗೆ ಅನುಕೂಲವಾಗಿದ್ದು, ಸದರಿ ಪಾರ್ಕ್ ಸ್ಥಾಪನೆಯಾದಲ್ಲಿ ಪ್ರತ್ಯೇಕವಾಗಿ ಹಾಗೂ ಪರೋಕ್ಷವಾಗಿ ಸ್ಥಳೀಯರಿಗೆ ಉತ್ತಮ ಉದ್ಯೋಗವಕಾಶಗಳು ಲಭ್ಯವಾಗುವುದೆಂದು ತಿಳಿಸಿರುತ್ತಾರೆ.

ಪ್ರಾದೇಶಿಕ ಆಯುಕ್ತರು ಬೆಳಗಾವಿ ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 35 ಎಲ್‌ಜಿಡಿ 2015 ಬೆಂಗಳೂರು ದಿ:16–10–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಹಾವೇರಿ ಜಿಲ್ಲೆ, ಹಾವೇರಿ ತಾಲ್ಲೂಕು, ಕುಳೇನೂರು ಗ್ರಾಮದ ರಿ.ಸ.ನಂ.92/2ಅ ರಲ್ಲಿನ ಒಟ್ಟು 135–12ಎಕರೆ ಸರ್ಕಾರಿ ಖರಾಬು ಜಮೀನಿನ ಪೈಕಿ 50–00ಎಕರೆ ಜಮೀನನ್ನು ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 68(1) ಹಾಗೂ 68(5) ರನ್ವಯ ಸಾರ್ವಜನಿಕ ಹಕ್ಕಿನಿಂದ ವಿಹಿತಗೊಳಿಸಿ, **"ಸ್ಪೈಸ್ ಪಾರ್ಕ್"** ಸ್ಥಾಪಿಸಲು ಸ್ಪೈಸ್ ಮಂಡಳಿ, ವಾಣಿಜ್ಯ ಮತ್ತು ಕೈಗಾರಿಕೆ ಮಂತ್ರಾಲಯ, ಭಾರತ ಸರ್ಕಾರ ಇವರಿಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 22(ಎ)–(iv) ರಡಿಯಲ್ಲಿ, ಈ ಕೆಳಕಂಡ ಷರತ್ತುಗಳೊಂದಿಗೆ, ಉಚಿತವಾಗಿ ಮಂಜೂರು ಮಾಡಿ ಆದೇಶಿಸಿದೆ.

1) ಜಮೀನು ಹಸ್ತಾಂತರ ಪ್ರಕ್ರಿಯೆಯನ್ನು ಜಿಲ್ಲಾಧಿಕಾರಿ, ಹಾವೇರಿ ಜಿಲ್ಲೆ ಇವರು ನಿಯಮಾನುಸಾರ ನಿರ್ವಹಿಸಲು ನಿರ್ದೇಶನ ನೀಡಿದೆ.
2) ಭೂ ಮಂಜೂರಾತಿ ಸಂದರ್ಭದಲ್ಲಿ ಅನಾವಶ್ಯಕ ವ್ಯಾಜ್ಯಗಳಿಗೆ ಎಡೆಮಾಡಿಕೊಡದಂತೆ ಹಾಗೂ ಸ್ಪೈಸ್ ಮಂಡಳಿಯು ಸ್ಥಳೀಯರಿಗೆ ಉದ್ಯೋಗ ಅವಕಾಶಕ್ಕೆ ಆದ್ಯತೆ ನೀಡುವುದು.
3) ಮಂಜೂರಾದ ಭೂಮಿಯನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
4) ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
5) ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪಗುತ್ತಿಗೆ ನೀಡುವುದಾಗಲಿ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು. ಹಾಗೂ ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.
6) ಮಂಜೂರಾದ ಜಮೀನಿನಲ್ಲಿ, ಅಭಿವೃದ್ಧಿ ಕಾರ್ಯಗಳನ್ನು ಆರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರಾವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.

7) ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ದವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ, ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೆ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಮಹಾಂತೇಗೌಡ.ಎಸ್.ಎಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ(ಭೂ.ಮಂಜೂರಾತಿ–3)

**PR. 674**
**SC.25**

## ಆರ್ಥಿಕ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮಕ್ಕೆ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆ, 2003ರಡಿ ವಿಧಿಸಿರುವ ಬಾಕಿ ದಂಡವನ್ನು ಅನುದಾನ ನೀಡುವ ಮೂಲಕ ಮನ್ನಾ ಮಾಡುವ ಬಗ್ಗೆ.

**ಓದಲಾಗಿದೆ:** 1. ವ್ಯವಸ್ಥಾಪಕ ನಿರ್ದೇಶಕರು, ಅರಣ್ಯ ಕೈಗಾರಿಕಾ ನಿಗಮ, ಇವರು ವಾಣಿಜ್ಯ ತೆರಿಗೆಗಳ ಆಯುಕ್ತರಿಗೆ ಕಳುಹಿಸಿರುವ ಅ.ಸ. ಪತ್ರ ಸಂಖ್ಯೆ:ಕೆಎಸ್ಎಫ್ಐಸಿ/ ವ್ಯಾಟ್–ಪೇಮೆಂಟ್/2013, ದಿನಾಂಕ 19/06/2013.

2. ವಾಣಿಜ್ಯ ತೆರಿಗೆಗಳ ಆಯುಕ್ತರ ಪತ್ರ ಸಂಖ್ಯೆ:ಡಬ್ಲ್ಯೂಆರ್‌ಪಿ/ಸಿಆರ್– 10/2013–14, ದಿನಾಂಕ 20/01/2015.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮದ ಕರದಾತರು ಅರಣ್ಯ ಉತ್ಪನ್ನಗಳನ್ನು ಮಾರಾಟ ಮಾಡುವಾಗ ಸಾಗಾಣಿಕೆ ವೆಚ್ಚದ ಮೇಲೆ ನಮೂನೆ–100ನ್ನು ಸಲ್ಲಿಸಿ ವ್ಯಾಟ್ ವಿನಾಯಿತಿಗೆ ಕೋರಿಕೆ ಸಲ್ಲಿಸುತ್ತಿದ್ದು, ದಿನಾಂಕ 01/04/2005ರಿಂದ ಜಾರಿಗೆ ಬಂದಿರುವ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆ, 2003ರ ಕುರಿತು ತೆರಿಗೆ ಬಾಧ್ಯತೆ ಬಗ್ಗೆ ನಿಖರ ಮಾಹಿತಿ/ತಿಳುವಳಿಕೆ ಇಲ್ಲದಿದ್ದ ಕಾರಣ, ಮಾಸಿಕ ವರದಿಗಳನ್ನು ಸಲ್ಲಿಸುವಾಗ ಮೂಲ ತೆರಿಗೆಯನ್ನು ಪಾವತಿಸಿರಲಿಲ್ಲ ಎಂದು ತಿಳಿಸಿ, ವಾಣಿಜ್ಯ ತೆರಿಗೆ ಅಧಿಕಾರಿಗಳು 2005–06ರಿಂದ 2009–10ರವರೆಗಿನ ಅವಧಿಗೆ ಕೈಗೊಂಡ ಲೆಕ್ಕ ಪರಿಶೋಧನೆಯನ್ವಯ ಮರುಕರ ನಿರ್ಧಾರಣೆ ಆದೇಶ ಹೊರಡಿಸಿ, ಸಾಗಾಣಿಕೆ ವೆಚ್ಚದ ಮೇಲೆ ವಿಧಿಸಿದ್ದ ವ್ಯಾಟ್ ತೆರಿಗೆಯನ್ನು ಪಾವತಿಸಿಲ್ಲದಿದ್ದರಿಂದ ಪ್ರಕರಣ 36 ಮತ್ತು 72 (2)ರ ಅಡಿಯಲ್ಲಿ ಬಡ್ಡಿ ಮತ್ತು ದಂಡವನ್ನು ವಿಧಿಸಿರುವುದರಿಂದ, ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆ, 2003ರ ಅಡಿಯಲ್ಲಿ ವಿಧಿಸಿದ ದಂಡ ಪ್ರಕರಣ 72(2)ರನ್ವಯ ರೂ.33,52,204/–ಗಳನ್ನು ಮನ್ನಾ ಮಾಡುವಂತೆ ಅರಣ್ಯ ಕೈಗಾರಿಕಾ ನಿಗಮದ ವ್ಯವಸ್ಥಾಪಕ ನಿರ್ದೇಶಕರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ನಿಗಮವು ದುಡಿಯುವ ಬಂಡವಾಳ ಹೊಂದಿಲ್ಲದೆ ಸ್ವಂತ ಆದಾಯದಿಂದ ಕಾರ್ಯ ನಿರ್ವಹಿಸುತ್ತಿದ್ದು, ಹಣಕಾಸಿನ ಪರಿಸ್ಥಿತಿಯು ಉತ್ತಮವಾಗಿಲ್ಲದಿರುವುದರಿಂದ, ತಡವಾಗಿ ಪಾವತಿಸಿದ ವ್ಯಾಟ್ ತೆರಿಗೆ ರೂ.255.00 ಲಕ್ಷಕ್ಕೆ ಬಡ್ಡಿ ಮತ್ತು ದಂಡವನ್ನು ವಿಧಿಸಿರುವುದರಿಂದಾಗಿ ನಿಗಮಕ್ಕೆ ಅನಿರೀಕ್ಷಿತವಾಗಿ ಆರ್ಥಿಕ ಹೊರೆ ಬಿದ್ದಿದ್ದು, 2005–06ರಿಂದ 2009–10ರ ಅವಧಿಗೆ ನಿಗಮಕ್ಕೆ ದೊರಕಿದ ಅಲ್ಪ ಲಾಭಾಂಶ ಮತ್ತು ಹಣದ ಲಭ್ಯತೆಯಿಂದ ಮೂಲ ತೆರಿಗೆಯನ್ನು ಪಾವತಿಸಲಾಗಿದೆ ಎಂದು ವ್ಯವಸ್ಥಾಪಕ ನಿರ್ದೇಶಕರು ಮೇಲೆ (1)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ತಿಳಿಸಿರುತ್ತಾರೆ.

ಅರಣ್ಯ ಕೈಗಾರಿಕಾ ನಿಗಮವು ದುಡಿಯುವ ಬಂಡವಾಳ ಹೊಂದಿರುವುದಿಲ್ಲ ಮತ್ತು ಸ್ವಂತ ಆದಾಯದಿಂದ ಕಾರ್ಯ ನಿರ್ವಹಿಸುತ್ತಿದ್ದು, ಆರ್ಥಿಕ ಪರಿಸ್ಥಿತಿ ಉತ್ತಮವಾಗಿಲ್ಲದಿದ್ದರೂ, 2005–06ರಿಂದ 2009–10ರವರೆಗೆ ವಿಧಿಸಲಾಗಿದ್ದ ವ್ಯಾಟ್ ರೂ.255.00 ಲಕ್ಷಗಳನ್ನು ಪಾವತಿಸಿ, ಬಡ್ಡಿ ಮತ್ತು ದಂಡವನ್ನು ಮನ್ನಾ ಮಾಡಲು ಕೋರಿರುತ್ತಾರೆಂದು ತಿಳಿಸುತ್ತಾ, ಅರಣ್ಯ ಉತ್ಪನ್ನಗಳ ಸಾಗಾಣಿಕೆ ವೆಚ್ಚ ಸೇರಿಸಿ ಮಾರಾಟ ಮೌಲ್ಯದ ಮೇಲೆ ವಿಧಿಸಿರುವ ತೆರಿಗೆ ಕಾನೂನುಬದ್ಧವಾಗಿದ್ದು, ತಪ್ಪು ಗ್ರಹಿಕೆಯಿಂದಾಗಿ ಕರ್ನಾಟಕ ಮಾರಾಟ ತೆರಿಗೆ ಕಾಯ್ದೆ, 1957ರಡಿ ವಿನಾಯಿತಿ ಕೋರಿ ತೆರಿಗೆ ಪಾವತಿಸಿಲ್ಲವಾದ್ದರಿಂದ, ಹೆಚ್ಚುವರಿ ತೆರಿಗೆ ಜೊತೆಗೆ ಬಡ್ಡಿ ಮತ್ತು ದಂಡವನ್ನು ವಿಧಿಸಲಾಗಿದೆ ಎಂದು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ವಾಣಿಜ್ಯ ತೆರಿಗೆ ಆಯುಕ್ತರು ತಿಳಿಸಿರುತ್ತಾರೆ. ಆದರೆ, ಕರ್ನಾಟಕ ಮಾರಾಟ ತೆರಿಗೆ ಕಾಯ್ದೆ, 1957ರ ನಿಯಮದಡಿ ಪ್ರತ್ಯೇಕವಾಗಿ ಸಂಗ್ರಹಿಸಿದ / ಭರಿಸಿದ ಸಾಗಾಣಿಕೆ ವೆಚ್ಚವು ತೆರಿಗೆದಾಯಕ ವಹಿವಾಟಿನಿಂದ ವಿನಾಯಿತಿಗೆ ಲಭ್ಯವಿದ್ದು, ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆ, 2003ರಡಿ ದಿನಾಂಕ 01/04/2005ರಿಂದ ಇಂತಹ ವಿನಾಯಿತಿಗೆ ಅವಕಾಶವಿಲ್ಲವೆಂದು ತಿಳಿಸುತ್ತಾ, ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆ, 2003ರ ಪ್ರಕರಣ 42 (5)ರ ಪ್ರಕಾರ, ಆಯುಕ್ತರು ಅಥವಾ ಸರ್ಕಾರವು ಪ್ರಕರಣ 36ರಡಿ ವಿಧಿಸಿರುವ ಬಡ್ಡಿಯನ್ನು ಮಾತ್ರ ಮನ್ನಾ ಮಾಡಲು ಅವಕಾಶವಿದ್ದು, ಪ್ರಕರಣ 72 (2)ರ ಅಡಿ ವಿಧಿಸಿದ ದಂಡವನ್ನು ಮನ್ನಾ ಮಾಡಲು ಅವಕಾಶವಿಲ್ಲವೆಂದೂ, ದಂಡವನ್ನು ಮನ್ನಾ ಮಾಡುವುದಾದರೆ, ಈ ದಂಡಕ್ಕೆ ಸಮನಾದ ಮೊತ್ತವನ್ನು ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮಕ್ಕೆ ಅನುದಾನ ನೀಡುವ ಮೂಲಕ ದಂಡವನ್ನು ತೆಗೆದು ಹಾಕಬಹುದು ಹಾಗೂ ಈ ರೀತಿ ಮಾಡುವುದರಿಂದ, ಇದು ಕೇವಲ ಲೆಕ್ಕ ಹೊಂದಾಣಿಕೆ ಆಗಿದ್ದು, ಯಾವುದೇ ರೀತಿಯ ನಗದು ಹೊರ ಹರಿವು ಒಳಗೊಳ್ಳುವುದಿಲ್ಲವೆಂದೂ ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ವಾಣಿಜ್ಯ ತೆರಿಗೆ ಆಯುಕ್ತರು ಅಭಿಪ್ರಾಯ ನೀಡಿರುತ್ತಾರೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಗಣಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸುತ್ತದೆ:

**ಆದೇಶ ಸಂಖ್ಯೆ:ಆಇ 33 ಸಿಎಸ್ಎಲ್ 2014, ಬೆಂಗಳೂರು, ದಿನಾಂಕ: 29/10/2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತದ ಕೋರಿಕೆಯಂತೆ, ಮರುಕರ ನಿರ್ಧಾರಣೆ ಮೂಲಕ ವಾಣಿಜ್ಯ ತೆರಿಗೆ ಇಲಾಖೆಯಿಂದ 2005–06ರಿಂದ 2009–10ರ ಅವಧಿಗೆ ವಿಧಿಸಲಾಗಿರುವ ರೂ.33.52 ಲಕ್ಷಗಳ ದಂಡವನ್ನು ಲೆಕ್ಕ ಶೀರ್ಷಿಕೆ "2040–00–101–0–07–ಬಡ್ಡಿ ಬಾಕಿ ಮನ್ನಾ–ತಿರುಳು ಮರ (ಪಲ್ಪ್ ವುಡ್)–261–ಅಂತರ್‌ಲೆಕ್ಕ ವರ್ಗಾವಣೆಗಳು" ಅಡಿ

ಒದಗಿಸಿ ಖರ್ಚು ಹಾಕಿ ಅದರಂತೆಯೇ ಪ್ರತಿಯಾಗಿ ಲೆಕ್ಕ ಶೀರ್ಷಿಕೆ "0040–00–110–1–05" ಅಡಿ ಜಮೆಗೆ ತೆಗೆದುಕೊಂಡು ನಗದು ಹೊರಹರಿವುರಹಿತವಾಗಿ ಕೇವಲ ಪುಸ್ತಕ ಹೊಂದಾಣಿಕೆ ಮಾಡಿಕೊಂಡು ದಂಡ ರೂ.33.52 ಲಕ್ಷಗಳನ್ನು ಪೂರ್ಣವಾಗಿ ಮನ್ನಾ ಮಾಡಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ವಾ.ತೆ–1).

**PR. 680**

## ಆರ್ಥಿಕ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮಕ್ಕೆ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆ, 2003ರಡಿ ಬಾಕಿಯಿರುವ ಬಡ್ಡಿಯನ್ನು ಮನ್ನಾ ಮಾಡುವ ಬಗ್ಗೆ.

**ಓದಲಾಗಿದೆ:**
1. ವ್ಯವಸ್ಥಾಪಕ ನಿರ್ದೇಶಕರು, ಅರಣ್ಯ ಕೈಗಾರಿಕಾ ನಿಗಮ, ಇವರು ವಾಣಿಜ್ಯ ತೆರಿಗೆಗಳ ಆಯುಕ್ತರಿಗೆ ಕಳುಹಿಸಿರುವ ಅ.ಸ. ಪತ್ರ ಸಂಖ್ಯೆ:ಕೆಎಸ್ಎಫ್ಐಸಿ/ವ್ಯಾಟ್–ಪೇಮೆಂಟ್/2013, ದಿನಾಂಕ 19/06/2013.
2. ವಾಣಿಜ್ಯ ತೆರಿಗೆಗಳ ಆಯುಕ್ತರ ಪತ್ರ ಸಂಖ್ಯೆ:ಡಬ್ಲ್ಯೂಆರ್‌ಪಿ/ಸಿಆರ್–10/2013–14, ದಿನಾಂಕ 20/01/2015.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮದ ಕರದಾತರು ಅರಣ್ಯ ಉತ್ಪನ್ನಗಳನ್ನು ಮಾರಾಟ ಮಾಡುವಾಗ ಸಾಗಾಣಿಕೆ ವೆಚ್ಚದ ಮೇಲೆ ನಮೂನೆ–100ನ್ನು ಸಲ್ಲಿಸಿ ವ್ಯಾಟ್ ವಿನಾಯಿತಿಗೆ ಕೋರಿಕೆ ಸಲ್ಲಿಸುತ್ತಿದ್ದು, ದಿನಾಂಕ 01/04/2005ರಿಂದ ಜಾರಿಗೆ ಬಂದಿರುವ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆ, 2003ರ ಕುರಿತು ತೆರಿಗೆ ಬಾಧ್ಯತೆ ಬಗ್ಗೆ ನಿಖರ ಮಾಹಿತಿ/ತಿಳುವಳಿಕೆ ಇಲ್ಲದಿದ್ದ ಕಾರಣ, ಮಾಸಿಕ ವರದಿಗಳನ್ನು ಸಲ್ಲಿಸುವಾಗ ಮೂಲ ತೆರಿಗೆಯನ್ನು ಪಾವತಿಸಿರಲಿಲ್ಲ ಎಂದು ತಿಳಿಸಿ, ವಾಣಿಜ್ಯ ತೆರಿಗೆ ಅಧಿಕಾರಿಗಳು 2005–06ರಿಂದ 2009–10ರವರೆಗಿನ ಅವಧಿಗೆ ಕೈಗೊಂಡ ಲೆಕ್ಕ ಪರಿಶೋಧನೆಯನ್ವಯ ಮರುಕರ ನಿರ್ಧಾರಣೆ ಆದೇಶ ಹೊರಡಿಸಿ, ಸಾಗಾಣಿಕೆ ವೆಚ್ಚದ ಮೇಲೆ ವಿಧಿಸಿದ್ದ ವ್ಯಾಟ್ ತೆರಿಗೆಯನ್ನು ಪಾವತಿಸಿಲ್ಲದಿದ್ದರಿಂದ ಪ್ರಕರಣ 36ರ ಅಡಿಯಲ್ಲಿ ಬಡ್ಡಿಯನ್ನು ವಿಧಿಸಿದ್ದು, ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆ, 2003ರ ಪ್ರಕರಣ 42 (5)ರನ್ವಯ ಬಡ್ಡಿ ರೂ.1,78,86,133/–ಗಳನ್ನು ಮನ್ನಾ ಮಾಡುವಂತೆ ಅರಣ್ಯ ಕೈಗಾರಿಕಾ ನಿಗಮದ ವ್ಯವಸ್ಥಾಪಕ ನಿರ್ದೇಶಕರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಕೋರುತ್ತಾ, ನಿಗಮವು ದುಡಿಯುವ ಬಂಡವಾಳ ಹೊಂದಿಲ್ಲದೆ ಸ್ವಂತ ಆದಾಯದಿಂದ ಕಾರ್ಯ ನಿರ್ವಹಿಸುತ್ತಿದ್ದು, ಹಣಕಾಸಿನ ಪರಿಸ್ಥಿತಿಯು ಉತ್ತಮವಾಗಿಲ್ಲದಿರುವುದರಿಂದ, ತಡವಾಗಿ ಪಾವತಿಸಿದ ವ್ಯಾಟ್ ತೆರಿಗೆ ರೂ.255.00 ಲಕ್ಷಕ್ಕೆ ಬಡ್ಡಿ ಮತ್ತು ದಂಡವನ್ನು ವಿಧಿಸಿರುವುದರಿಂದಾಗಿ ನಿಗಮಕ್ಕೆ ಅನಿರೀಕ್ಷಿತವಾಗಿ ಆರ್ಥಿಕ ಹೊರೆ ಬಿದ್ದಿದ್ದು, 2005–06ರಿಂದ 2009–10ರ ಅವಧಿಗೆ ನಿಗಮಕ್ಕೆ ದೊರಕಿದ ಅಲ್ಪ ಲಾಭಾಂಶ ಮತ್ತು ಹಣದ ಲಭ್ಯತೆಯಿಂದ ಮೂಲ ತೆರಿಗೆಯನ್ನು ಪಾವತಿಸಲಾಗಿದೆ ಎಂದೂ ವ್ಯವಸ್ಥಾಪಕ ನಿರ್ದೇಶಕರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ತಿಳಿಸಿರುತ್ತಾರೆ.

ಅರಣ್ಯ ಕೈಗಾರಿಕಾ ನಿಗಮವು ಸರ್ಕಾರಿ ಸ್ವಾಮ್ಯದ ಸಂಸ್ಥೆಯಾಗಿದ್ದು, ಆರ್ಥಿಕ ಪರಿಸ್ಥಿತಿ ಉತ್ತಮವಾಗಿಲ್ಲದಿದ್ದರೂ, 2005–06ರಿಂದ 2009–10ರವರೆಗೆ ವಿಧಿಸಲಾಗಿದ್ದ ವ್ಯಾಟ್ ರೂ.255.00 ಲಕ್ಷಗಳನ್ನು ಸಂಸ್ಥೆಯು ಪಾವತಿಸಿರುತ್ತದೆ ಎಂದು ತಿಳಿಸಿ, ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿನ ವ್ಯವಸ್ಥಾಪಕ ನಿರ್ದೇಶಕರ ಕೋರಿಕೆಯನ್ನು ಪರಿಶೀಲಿಸಿ, ಸಾಗಾಣಿಕೆ ವೆಚ್ಚದ ಮೇಲೆ ಲೆಕ್ಕಾಧಿಕಾರಿಗಳು / ಕರನಿರ್ಧಾರಣಾಧಿಕಾರಿಗಳು ವಿಧಿಸಿರುವ ಬಡ್ಡಿ ಮತ್ತು ದಂಡ ಕಾನೂನುಬದ್ಧವಾಗಿದ್ದು, ತೆರಿಗೆ ಬಾಧ್ಯತೆ ಬಗ್ಗೆ ಸಂಸ್ಥೆಗೆ ತಪ್ಪು ತಿಳುವಳಿಕೆ ಇದ್ದರೂ, 2011ರಲ್ಲಿ ಕೈಗೊಂಡ ಮರುಕರ ನಿರ್ಧಾರಣೆ ಆದೇಶದಂತೆ ಹೆಚ್ಚುವರಿ ತೆರಿಗೆ ಜೊತೆಗೆ ಬಡ್ಡಿ ಮತ್ತು ದಂಡವನ್ನು ವಿಧಿಸಲಾಗಿದೆ ಎಂದು, ಸಂಸ್ಥೆಯು ಆರ್ಥಿಕವಾಗಿ ಸುಸ್ಥಿತಿಯಲ್ಲಿಲ್ಲದಿರುವುದರಿಂದ ಮತ್ತು ಮೂಲ ತೆರಿಗೆಯನ್ನು ಪೂರ್ಣವಾಗಿ ಪಾವತಿಸಿರುವುದರಿಂದ, ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆ, 2003ರ ಪ್ರಕರಣ 42 (5)ರ ಪ್ರಕಾರ, ಆಯುಕ್ತರು ಅಥವಾ ಸರ್ಕಾರವು ಪ್ರಕರಣ 36ರಡಿ ವಿಧಿಸಿರುವ ಬಡ್ಡಿಯನ್ನು ಮನ್ನಾ ಮಾಡಲು ಅವಕಾಶವಿರುವುದರಿಂದ, ಬಡ್ಡಿಯನ್ನು ಮನ್ನಾ ಮಾಡಬಹುದೆಂದು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ವಾಣಿಜ್ಯ ತೆರಿಗೆ ಆಯುಕ್ತರು ಅಭಿಪ್ರಾಯ ನೀಡಿರುತ್ತಾರೆ.

ಈ ಎಲ್ಲಾ ಅಂಶಗಳನ್ನು ಪರಿಗಣಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸುತ್ತದೆ:

**ಆದೇಶ ಸಂಖ್ಯೆ:ಆಇ 33 ಸಿಎಸ್ಎಲ್ 2014, ಬೆಂಗಳೂರು, ದಿನಾಂಕ: 29/10/2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತದ ಕೋರಿಕೆಯಂತೆ, ಮರುಕರ ನಿರ್ಧಾರಣೆ ಮೂಲಕ ವಾಣಿಜ್ಯ ತೆರಿಗೆ ಇಲಾಖೆಯಿಂದ 2005–06ರಿಂದ 2009–10ರ ಅವಧಿಗೆ ವಿಧಿಸಲಾಗಿರುವ ರೂ.1,78,86,133/– ಲಕ್ಷಗಳ ಬಡ್ಡಿಯನ್ನು ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆ, 2003ರ ಪ್ರಕರಣ 42 (5)ರಂತೆ ಪೂರ್ಣವಾಗಿ ಮನ್ನಾ ಮಾಡಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ವಾ.ತೆ–1).

**PR. 679**

**ಆರ್ಥಿಕ ಸಚಿವಾಲಯ**

**ವಿಷಯ:** ಶ್ರೀ ಕೆ. ರಾಮಾನುಜ ರೆಡ್ಡಿ, ವ್ಯವಸ್ಥಾಪಕ ಪಾಲುದಾರರು, ಶ್ರೀ ಸಾಯಿ ಮೋಟಾರ್ಸ್, ಕೋಲಾರ, (ಟಿನ್ ನಂ. 29620819903) ಇವರ ಪ್ರಕರಣದಲ್ಲಿ 2008–09 ರಿಂದ 2013–14ರವರೆಗೆ ಬಾಕಿ ಇರುವ ತೆರಿಗೆ ಪಾವತಿಸಲು ಕಂತು ಸೌಲಭ್ಯ ಹಾಗೂ ದಂಡ ಮತ್ತು ಬಡ್ಡಿಯನನು ಮನ್ನಾ ಮಾಡುವ ಬಗ್ಗೆ.

**ಓದಲಾಗಿದೆ:**
1. ಶ್ರೀ ಸಾಯಿ ಮೋಟಾರ್ಸ್ ಸಂಸ್ಥೆಯ ಮನವಿ ದಿನಾಂಕ: 23.03.2015, 26.03.2015, 13.05.2015 ಮತ್ತು 27.05.2015
2. ವಾಣಿಜ್ಯ ತೆರಿಗೆಗಳ ಆಯುಕ್ತರ ಪತ್ರ ಸಂಖ್ಯೆ: ಐಟಿಎಲ್/ಸಿಆರ್–03/2014–15, ದಿನಾಂಕ: 27–05–2015.
3. ಶ್ರೀ ಟಿ.ಎ.ಶರವಣ, ಶಾಸಕರು, ಕರ್ನಾಟಕ ವಿಧಾನ ಪರಿಷತ್ತು, ಇವರು ಮಾನ್ಯ ಮುಖ್ಯಮಂತ್ರಿಗಳಿಗೆ ಕಳುಹಿಸಿರುವ ದಿನಾಂಕ: 20.07.2015ರ ಪತ್ರ.
4. ಮಾನ್ಯ ಮುಖ್ಯಮಂತ್ರಿಯವರ ಆಪ್ತ ಕಾರ್ಯದರ್ಶಿ ಇವರ ಟಿಪ್ಪಣಿ ಸಂಖ್ಯೆ: ಮುಮಂಆಕಾ:9783/2015–16, ದಿನಾಂಕ: 01.08.2015.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ, ಶ್ರೀ ಸಾಯಿ ಮೋಟಾರ್ಸ್ ಪಾಲುಗಾರಿಕೆ ಸಂಸ್ಥೆಯು 2008–09ನೇ ಸಾಲಿನಿಂದ 2013–14ನೇ ಸಾಲಿನವರೆಗೆ ಮೌಲ್ಯವರ್ಧಿತ ತೆರಿಗೆ ಕಾಯ್ದೆಯಡಿ ವಿಧಿಸಿರುವ ದಂಡ ಮತ್ತು ಬಡ್ಡಿ ಪೂರ್ತಿಯಾಗಿ ಮನ್ನಾ ಮಾಡಬೇಕೆಂದು ಮತ್ತು ಈಗ ಬಾಕಿ ಇರುವ ತೆರಿಗೆ ಮೊತ್ತ ಪಾವತಿಸಲು ಮಾಸಿಕ ಕಂತು ಸೌಲಭ್ಯ ನೀಡಬೇಕೆಂದು ಕೋರಿರುತ್ತದೆ.

ಶ್ರೀ ಸಾಯಿ ಮೋಟಾರ್ಸ್ ಪಾಲುಗಾರಿಕೆ ಸಂಸ್ಥೆಯು ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆ, 2003ರಡಿಯಲ್ಲಿ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಎಲ್‌ವಿಓ 180, ಕೋಲಾರದ ಕಛೇರಿಯಲ್ಲಿ ನೋಂದಣಿ ಪಡೆದಿದ್ದು, ಹೋಂಡಾ ಮೋಟಾರ್ಸ್ ಪರಿಕರಗಳ ಖರೀದಿ ಮತ್ತು ಮಾರಾಟ ಮಾಡುತ್ತಿದ್ದಾರೆ.

ಸದರಿ ಸಂಸ್ಥೆಗೆ ಸಂಬಂಧಿಸಿದಂತೆ, 2008–09ರಿಂದ 2013–14ರವರೆಗಿನ ಅವಧಿಗೆ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆ, 2003ರ ಕಲಂ 39ರಡಿ ಲೆಕ್ಕ ಪರಿಶೋಧನೆ ಕೈಗೊಂಡು ಮರುಕರ ನಿರ್ಧಾರಣೆ ಆದೇಶಗಳನ್ನು ಹೊರಡಿಸಲಾಗಿದೆ. ಈ ಆದೇಶಗಳ ಪ್ರಕಾರ, ಈ ಅವಧಿಗಳಿಗೆ ಒಟ್ಟು ಮೌಲ್ಯವರ್ಧಿತ ತೆರಿಗೆ ರೂ. 8,47,07,542.00, ದಂಡ ರೂ. 90,07,480/– ಮತ್ತು ಬಡ್ಡಿ ರೂ. 2,92,70,882/–ನ್ನು ಕ್ರಮವಾಗಿ ಕಲಂ 39(1), 72(2) ಮತ್ತು 36(1)ರಡಿ ವಿಧಿಸಲಾಗಿದೆ. ಹಾಗೂ ಈಗ ಒಟ್ಟು ಬಾಕಿಯಲ್ಲಿ, ಸುಮಾರು 4.00 ಕೋಟಿ ರೂಗಳನ್ನು ಭಾಗಶ: ಪಾವತಿ ಮಾಡಿರುತ್ತಾರೆ. ಪ್ರಸ್ತುತ ವರ್ಷಾವಾರು ಬಾಕಿ ಇರುವ ತೆರಿಗೆ ಮತ್ತು ಬಡ್ಡಿ ಮೊತ್ತ ಈ ರೀತಿ ಇದೆ.

| ವರ್ಷ | ತೆರಿಗೆ | ದಂಡ | ಬಡ್ಡಿ |
|---|---|---|---|
| 2012–13 | ರೂ.77,69,606/– | – | – |
| 2013–14 | ರೂ.5,43,70,302/– | ರೂ. 59,73,159/– | ರೂ.1,41,51,490/– |
| | **ಒಟ್ಟು: ರೂ. 8,22,64,557–00** | | |

ಇಂತಹ ಸಂದರ್ಭದಲ್ಲಿ, ಬಾಕಿ ತೆರಿಗೆ ಮೊತ್ತ ಪಾವತಿಸಲು 36 ಮಾಸಿಕ ಕಂತು ಸೌಲಭ್ಯ ನೀಡಲು ಹಾಗೂ ದಂಡ ಮತ್ತು ಬಡ್ಡಿಯನ್ನು ಮನ್ನಾ ಮಾಡುವಂತೆ ಕೋರಿರುತ್ತಾರೆ. ಸಂಸ್ಥೆಯ ಮಾಲೀಕರು ಅನಾರೋಗ್ಯದಿಂದಾಗಿ ದೀರ್ಘ ಕಾಲದ ಚಿಕಿತ್ಸೆಯಲ್ಲಿದ್ದು, ಆರ್ಥಿಕ ಸಂಕಷ್ಟ ಎದುರಿಸುತ್ತಿದ್ದರೂ, ರೂ. 4.00 ಕೋಟಿಯಷ್ಟು ತೆರಿಗೆಯನ್ನು ಈಗಾಗಲೇ ಪಾವತಿ ಮಾಡಿರುವುದಾಗಿ ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ತಿಳಿಸಿರುತ್ತಾರೆ.

ಮೇಲೆ ಓದಲಾದ (2)ರ ಪತ್ರದಲ್ಲಿ, ಆಯುಕ್ತರು, ವಾಣಿಜ್ಯ ತೆರಿಗೆಗಳ ಇಲಾಖೆ, ಇವರು ಪ್ರಕರಣವನ್ನು ಪರಿಶೀಲಿಸಿ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ನಿಯಮಾವಳಿ 2005–ನಿಯಮ 53ರಲ್ಲಿ ಬಾಕಿ ತೆರಿಗೆ ಪಾವತಿಯ ಕಂತು ಸೌಲಭ್ಯಗಳಿಗೆ ಅವಕಾಶ ಇದೆಯೆಂದು ತಿಳಿಸಿ, ಸದರಿ ನಿಯಮದಡಿ ವಿಧಿಸಲಾದ ಷರತ್ತು ಮತ್ತು ನಿಬಂಧನೆಗಳನ್ನು ಪಾಲಿಸುವ ಷರತ್ತುಗಳಿಗೊಳಪಟ್ಟು ಜುಲೈ 2015 ರಿಂದ 36 ಸಮಾನ ಮಾಸಿಕ ಕಂತುಗಳಲ್ಲಿ ಬಾಕಿ ಇರುವ ತೆರಿಗೆ ಪಾವತಿಸಲು ಅನುಮತಿ ನೀಡಬಹುದೆಂದು ಹಾಗೂ 2013–14ನೇ ಸಾಲಿಗೆ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆ, 2003ರ ಕಲಂ 72(2)ರಡಿ ವಿಧಿಸಿರುವ ದಂಡ ರೂ. 59,73,159/–ಗಳ ಬಾಕಿಯನ್ನು ಮನ್ನಾ ಮಾಡಲು ಕಾನೂನಿನಲ್ಲಿ ಅವಕಾಶವಿಲ್ಲದ ಕಾರಣ, ಈ ದಂಡದ ಮೊತ್ತವನ್ನು ನಿಯಮ 53ರಡಿ ಕಂತು ಸೌಲಭ್ಯದಡಿ ಮೂಲ ತೆರಿಗೆ ಜೊತೆಗೆ 36 ಮಾಸಿಕ ಕಂತುಗಳಲ್ಲಿ ಪಾವತಿಸಬೇಕಾಗುತ್ತದೆ ಎಂದು ಹಾಗೂ ಇವರ ಈಗಿನ ಆರ್ಥಿಕ ಸಂಕಷ್ಟತೆ ಮತ್ತು ಅನಾರೋಗ್ಯ/ಚಿಕಿತ್ಸೆಗಳನ್ನೂ ಗಣನೆಗೆ ತೆಗೆದುಕೊಂಡು 2012–13 ಮತ್ತು 2013–14ನೇ ಸಾಲಿಗೆ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆ, 2003ರಡಿ ವಿಧಿಸಲಾಗುವ ಬಡ್ಡಿ ದರದಲ್ಲಿ ವಾರ್ಷಿಕ ಶೇಕಡ 6ಕ್ಕಿಂತ ಜಾಸ್ತಿ ಇರುವ ಬಡ್ಡಿಯನ್ನು ಮನ್ನಾ ಮಾಡಿ ಮಾಸಿಕ ಶೇ.0.5 ಬಡ್ಡಿ ದರದಂತೆ ಡಿಮ್ಯಾಂಡ್ ನೋಟಿಸಿನ ಪ್ರಕಾರ ಪಾವತಿಸಬೇಕಾಗಿದ್ದ ದಿನಾಂಕದಿಂದ ಬಾಕಿ ಇರುವ ತೆರಿಗೆ ಮೇಲೆ ಬಡ್ಡಿಯನ್ನು ಲೆಕ್ಕಾಚಾರ ಹಾಕಿ ಮಾಸಿಕ ಸಮ ಕಂತು ತೆರಿಗೆ ಜೊತೆಗೆ ಇದನ್ನೂ ಪಾವತಿಸಲು ಅನುಮತಿ ನೀಡಬಹುದೆಂದು ವಾಣಿಜ್ಯ ತೆರಿಗೆಗಳ ಆಯುಕ್ತರು ಶಿಫಾರಸ್ಸು ಮಾಡಿರುತ್ತಾರೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಆಇ 58 ಸಿಎಸ್‌ಎಲ್ 2015, ಬೆಂಗಳೂರು, ದಿನಾಂಕ: 19/10/2015.**

ಶ್ರೀ ಸಾಯಿ ಮೋಟಾರ್ಸ್ ಸಂಸ್ಥೆಯ ಪ್ರಕರಣದಲ್ಲಿ, ಕರ್ನಾಟಕ ಮೌಲ್ಯವರ್ಧಿತ ತೆರಿಗೆ ನಿಯಮಾವಳಿ 2005–ನಿಯಮ 53ರಲ್ಲಿ ವಿಧಿಸಲಾದ ಷರತ್ತು ಮತ್ತು ನಿಬಂಧನೆಗಳನ್ನು ಪಾಲಿಸುವ ಷರತ್ತಿಗೊಳಪಟ್ಟು ನವೆಂಬರ್ 2015 ರಿಂದ 36ಸಮಾನ ಮಾಸಿಕ ಕಂತುಗಳಲ್ಲಿ ಬಾಕಿ ಇರುವ ತೆರಿಗೆ ಮತ್ತು

ದಂಡವನ್ನು ಪಾವತಿಸಲು ಹಾಗೂ 2012–13 ಮತ್ತು 2013–14ನೇ ಸಾಲುಗಳಿಗೆ ಇರುವ ತೆರಿಗೆ ಬಾಕಿಗೆ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆ, 2003ರಡಿ ವಿಧಿಸಲಾದ ಬಡ್ಡಿ ದರದಲ್ಲಿ ವಾರ್ಷಿಕ ಶೇಕಡಾ 6.00ಕ್ಕಿಂತ ಜಾಸ್ತಿ ಬಡ್ಡಿಯನ್ನು ಮಾತ್ರ ಮನ್ನಾ ಮಾಡಲು ಸರ್ಕಾರದ ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ವಾ.ತೆ–1).

PR. 649

## ನಗರಾಭಿವೃದ್ಧಿ ಸಚಿವಾಲಯ

**ವಿಷಯಃ–** ಬೀದರ್ ಜಿಲ್ಲೆ, ಚಿಟಗುಪ್ಪ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ (ಪ–1) ಗೆ ಸರ್ಕಾರದ **ಅಂತಿಮ ಅನುಮೋದನೆ** ನೀಡುವ ಸಂಬಂಧ.

**ಓದಲಾಗಿದೆ:–**

1) ಸರ್ಕಾರದ ಆದೇಶ ಸಂಖ್ಯೆ:ನಅಇ:131:ಗುಅಪ್ರಾ:2010, ದಿನಾಂಕ:15–02–2011

2) ಸದಸ್ಯ ಕಾರ್ಯದರ್ಶಿ/ಮುಖ್ಯಾಧಿಕಾರಿಗಳು ಪುರಸಭೆ ಯೋಜನಾ ಪ್ರಾಧಿಕಾರ ಚಿಟಗುಪ್ಪ ಇವರ ಪತ್ರ ಸಂಖ್ಯೆ:ಪು.ಯೋ.ಪ್ರಾ.ಚಿ.ಮಹಾಯೋಜನೆ:ಪ–1:2011–12, ದಿನಾಂಕ:22.02.2015.

3) ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಏಕ ಕಡತ ಸಂಖ್ಯೆ: ನಯೋ/ಉನಿ(ಯೋವಿ)/ಚಿಟಗುಪ್ಪ/ಮಾ.ಪ್ಲಾ/2010–11 ರಲ್ಲಿ ನೀಡಿರುವ ಅಭಿಪ್ರಾಯ ದಿನಾಂಕ:31.03.2015.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಚಿಟಗುಪ್ಪ ಪಟ್ಟಣ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ ತಾತ್ಕಾಲಿಕ ಅನುಮೋದನೆ ನೀಡಲಾಗಿದೆ. ಮೇಲೆ ಓದಲಾದ (2)ರ ಪತ್ರದಲ್ಲಿ ಚಿಟಗುಪ್ಪ ಪುರಸಭೆ ಯೋಜನಾ ಪ್ರಾಧಿಕಾರವು, ಚಿಟಗುಪ್ಪ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾ ಯೋಜನೆ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(1)(2) ರನ್ವಯ ಅಗತ್ಯ ಕ್ರಮ ಜರುಗಿಸಿ ಮಹಾ ಯೋಜನೆಯ ನಕ್ಷೆಗಳನ್ನು ಹಾಗೂ ವರದಿಯನ್ನು ತಯಾರಿಸಿ ಅಂತಿಮ ಅನುಮೋದನೆಗೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (3)ರಲ್ಲಿ, ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಕಛೇರಿಯ ಕಡತದಲ್ಲಿ, ಚಿಟಗುಪ್ಪ ಪಟ್ಟಣದ ಜನಸಂಖ್ಯೆಯು 2021ರಲ್ಲಿ 40,000 ಗಳಷ್ಟು ಬೆಳವಣಿಗೆಯಾಗುವುದಾಗಿ ಅಂದಾಜಿಸಿ ಮಹಾ ಯೋಜನೆಯನ್ನು ತಯಾರಿಸಲಾಗಿದೆ. ಚಿಟಗುಪ್ಪ ನಗರದ ಸ್ಥಳೀಯ ಯೋಜನಾ ಪ್ರದೇಶದ ಒಟ್ಟು 2646 ಹೆಕ್ಟೇರ್ ಪ್ರದೇಶವನ್ನು ನಗರದ ಅಭಿವೃದ್ಧಿಗಾಗಿ ನಗರೀಕರಣದ ಎಲ್ಲೆಯೆಂದು ಪ್ರಸ್ತಾಪಿಸಿ ಮಹಾಯೋಜನೆಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ (12)ರಲ್ಲಿ ನಿಗದಿಪಡಿಸಿರುವ ಅಂಶಗಳನ್ನು ಪರಿಗಣಿಸಿ ನಗರದ ಮುಂದಿನ ಯೋಜಿತ ಬೆಳವಣಿಗೆಗೆ ಪ್ರಸ್ತಾಪಿಸಿರುವ ಪ್ರದೇಶ 543.45 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 312.00 ಹೆಕ್ಟೇರ್ (ಶೇ.57.41), ವಾಣಿಜ್ಯಕ್ಕಾಗಿ 21.79 ಹೆಕ್ಟೇರ್ (ಶೇ.4.0), ಕೈಗಾರಿಕೆಗಾಗಿ 3.79 ಹೆಕ್ಟೇರ್, (ಶೇ.0.7), ಸಾರ್ವಜನಿಕ ಅರೆ ಸಾರ್ವಜನಿಕ ಉಪಯೋಗಕ್ಕೆ 37.31 ಹೆಕ್ಟೇರ್, (ಶೇ.6.86) ಉದ್ಯಾನವನ ಮತ್ತು ಬಯಲು ಜಾಗಕ್ಕಾಗಿ 45.72 ಹೆಕ್ಟೇರ್ (ಶೇ.8.41) ಹಾಗೂ ಸಾರಿಗೆ/ ಸಂಪರ್ಕ ವಲಯಕ್ಕೆ 121.26 ಹೆಕ್ಟೇರ್ (ಶೇಕಡ 22.32), ನಾಗರೀಕ ಸೌಲಭ್ಯಕ್ಕಾಗಿ 1.58 ಹೆಕ್ಟೇರ್ (ಶೇ.0.3) ಪ್ರದೇಶವನ್ನು ನಿಗಧಿಪಡಿಸಲಾಗಿದೆ. ಮಹಾ ಯೋಜನೆಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಸದರಿ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(3) ರನ್ವಯ **ಅಂತಿಮ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.** ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡ ಆದೇಶವನ್ನು ಹೊರಡಿಸಲು ತೀಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:. ನಅಇ 86 ಗುಅಪ್ರಾ 2015, ದಿನಾಂಕ. 17.10.2015**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೀದರ್ ಜಿಲ್ಲೆ, ಚಿಟಗುಪ್ಪ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾಯೋಜನೆ (ಪ–1)ಗೆ ನಗರದ ಮುಂದಿನ ಯೋಜಿತ ಬೆಳವಣಿಗೆಗೆ ಪ್ರಸ್ತಾಪಿಸಿರುವ 543.45 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 312.00 ಹೆಕ್ಟೇರ್ (ಶೇ.57.41), ವಾಣಿಜ್ಯಕ್ಕಾಗಿ 21.79 ಹೆಕ್ಟೇರ್ (ಶೇ.4.0), ಕೈಗಾರಿಕೆಗಾಗಿ 3.79 ಹೆಕ್ಟೇರ್, (ಶೇ.0.7), ಸಾರ್ವಜನಿಕ / ಅರೆ ಸಾರ್ವಜನಿಕ ಉಪಯೋಗಕ್ಕೆ 37.31 ಹೆಕ್ಟೇರ್, (ಶೇ.6.86) ಉದ್ಯಾನವನ ಮತ್ತು ಬಯಲು ಜಾಗಕ್ಕಾಗಿ 45.72 ಹೆಕ್ಟೇರ್ (ಶೇ.8.41) ಹಾಗೂ ಸಾರಿಗೆ / ಸಂಪರ್ಕ ವಲಯಕ್ಕೆ 121.26 ಹೆಕ್ಟೇರ್ (ಶೇಕಡ 22.32), ನಾಗರೀಕ ಸೌಲಭ್ಯಕ್ಕಾಗಿ 1.58 ಹೆಕ್ಟೇರ್ (ಶೇ.0.3) ಪ್ರದೇಶವನ್ನು ನಿಗಧಿಪಡಿಸಿ ಈ ಕೆಳಕಂಡ ಷರತ್ತಿಗೊಳಪಟ್ಟು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಪ್ರಕರಣ 13(3)ರನ್ವಯ ಸರ್ಕಾರದ **ಅಂತಿಮ ಅನುಮೋದನೆಯನ್ನು ನೀಡಲಾಗಿದೆ.** ಮಹಾ ಯೋಜನೆ (ಪ–1)ಗೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

**ಷರತ್ತು:**

1) ಈ ಆದೇಶದ ದಿನಾಂಕದಿಂದ ಎರಡು ವರ್ಷಗಳವರೆಗೆ ಪ್ರಾಧಿಕಾರವು ಯಾವುದೇ ಭೂ ಉಪಯೋಗ ಬದಲಾವಣೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಕೂಡದು.

2) ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 69(1) ರ ಪ್ರಕಾರ 5 ವರ್ಷಗಳ ಒಳಗೆ ಉದ್ಯಾನವನ, ಬಯಲು ಜಾಗ, ಆಟದ ಮೈದಾನ ಮತ್ತು ಸಾರ್ವಜನಿಕ/ಅರೆ ಸಾರ್ವಜನಿಕ ಉಪಯೋಗಕ್ಕೆ ಮೀಸಲಿಟ್ಟ ಜಮೀನುಗಳನ್ನು ನಿಯಮಾನುಸಾರ ಭೂ ಸ್ವಾಧೀನ ಪಡಿಸಿಕೊಳ್ಳಲು ಕ್ರಮ ಜರುಗಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ರಾಜೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ.

**PR. 673**
**SC.150**

## ನಗರಾಭಿವೃದ್ಧಿ ಸಚಿವಾಲಯ

**ವಿಷಯಃ–** ಕಲಬುರಗಿ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಹೆಚ್ಚುವರಿ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸುವ ಬಗ್ಗೆ.

**ಓದಲಾಗಿದೆ:–** ಆಯುಕ್ತರು, ಕಲಬುರಗಿ ನಗರಾಭಿವೃದ್ಧಿ ಪ್ರಾಧಿಕಾರ, ಕಲಬುರಗಿ ಇವರ ಪತ್ರ ಸಂಖ್ಯೆ: ನಪ್ರಾಕ/ಸಿಬ್ಬಂದಿ/9/2015–16 /35 ದಿನಾಂಕ : 08–04–2015, 20–05–2015 ಮತ್ತು 03–08–2015.

**ಪ್ರಸ್ತಾವನೆ:**

ಆಯುಕ್ತರು, ಕಲಬುರಗಿ ನಗರಾಭಿವೃದ್ಧಿ ಪ್ರಾಧಿಕಾರ, ಕಲಬುರಗಿ ರವರು ಮೇಲೆ ಓದಲಾದ ದಿನಾಂಕ 08–04–2015 ರ ಪತ್ರದಲ್ಲಿ ಕಲಬುರಗಿ ನಗರಾಭಿವೃದ್ಧಿ ಪ್ರಾಧಿಕಾರವು ದಿನಾಂಕ 01–06–1988 ರಂದು ಅಸ್ಥಿತ್ವಕ್ಕೆ ಬಂದು ದಿನಾಂಕ 23–07–2004 ರಂದು ಸರ್ಕಾರದಿಂದ ಪ್ರಾಧಿಕಾರಕ್ಕೆ ಪ್ರತ್ಯೇಕ ವೃಂದ ಮತ್ತು ನೇಮಕಾತಿ ನಿಯಮಗಳು ಅನುಮೋದನೆಗೊಂಡಿದ್ದು, ಪ್ರಸ್ತುತ ಪ್ರಾಧಿಕಾರದ ಚಟುವಟಿಕೆಗಳು ಹೆಚ್ಚುತ್ತಿರುವುದರಿಂದ ಹೊಸದಾಗಿ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆಯುಕ್ತರು, ಕಲಬುರಗಿ ನಗರಾಭಿವೃದ್ಧಿ ಪ್ರಾಧಿಕಾರ ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ವಿವಿಧ ವೃಂದದ 8 ತಾತ್ಕಾಲಿಕ ಹುದ್ದೆಗಳನ್ನು ಸೃಜಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 99 ಗುಅಪ್ರಾ 2015 ಬೆಂಗಳೂರು, ದಿನಾಂಕ: 15–10–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಆಯುಕ್ತರು, ಕಲಬುರಗಿ ನಗರಾಭಿವೃದ್ಧಿ ಪ್ರಾಧಿಕಾರ, ಕಲಬುರಗಿ ರವರ ಶಿಫಾರಸ್ಸಿನಂತೆ ಕಲಬುರಗಿ ಅಭಿವೃದ್ಧಿ ಪ್ರಾಧಿಕಾರಕ್ಕೆ ಈ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಈ ಕೆಳಕಂಡ ಷರತ್ತಿಗೊಳಪಟ್ಟು ಮಂಜೂರಾತಿ ನೀಡಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಹುದ್ದೆಯ ಹೆಸರು ಮತ್ತು ವೇತನ ಶ್ರೇಣಿ | ತಾತ್ಕಾಲಿಕವಾಗಿ ಸೃಜಿಸಲಾದ ಹುದ್ದೆಗಳ ಸಂಖ್ಯೆ |
|---|---|---|
| 1. | ಸಹಾಯಕ ಅಭಿಯಂತರರು<br>(ವೇತನ ಶ್ರೇಣಿ: 22800–43200) | 01 |
| 2. | ಕಿರಿಯ ಅಭಿಯಂತರರು<br>(ವೇತನ ಶ್ರೇಣಿ: 17650–32200) | 02 |
| 3. | ಪ್ರಥಮ ದರ್ಜೆ ಲೆಕ್ಕ ಸಹಾಯಕರು<br>(ವೇತನ ಶ್ರೇಣಿ :14550–26700) | 01 |
| 4. | ಪ್ರಥಮ ದರ್ಜೆ ಸಹಾಯಕರು<br>(ವೇತನ ಶ್ರೇಣಿ :14550–26700) | 02 |
| 5. | ದ್ವಿತೀಯ ದರ್ಜೆ ಸಹಾಯಕರು<br>(ವೇತನ ಶ್ರೇಣಿ :11600–21000) | 02 |
| | **ಒಟ್ಟು** | **08** |

**ಷರತ್ತುಗಳು:**

1. ಸದರಿ ಹುದ್ದೆಗಳಿಗೆ ತಗಲುವ ಎಲ್ಲಾ ವೆಚ್ಚಗಳನ್ನು ಆಯಾಯ ಪ್ರಾಧಿಕಾರಗಳೇ ಭರಿಸತಕ್ಕದ್ದು ಹಾಗೂ ಸರ್ಕಾರದಿಂದ ಯಾವುದೇ ಅನುದಾನವನ್ನು ಕೋರತಕ್ಕದ್ದಲ್ಲ.
2. ಪ್ರಸ್ತಾಪಿತ ಸೃಜಿಸಲು ಕೋರಿರುವ ಹುದ್ದೆಗಳನ್ನು ನಿಯೋಜನೆ ಮೇಲೆ ಮಾತ್ರ ಭರ್ತಿ ಮಾಡಿಕೊಳ್ಳತಕ್ಕದ್ದು.
3. ಸದರಿ ಹುದ್ದೆಗಳನ್ನು ಪ್ರತಿ ವರ್ಷ ಮುಂದುವರೆಸಲು ಪ್ರಸ್ತಾವನೆ ಸಲ್ಲಿಸುವುದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್.ಡಿ 01 ಟಿ.ಎಫ್.ಪಿ 1996, ದಿನಾಂಕ 10–07–1996ರನ್ವಯ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿ.ರಾಜೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**PR. 671**
**SC.50**

## ಕಂದಾಯ ಸಚಿವಾಲಯ

**ವಿಷಯಃ–** ಭಾರತಿ ಎಜುಕೇಶನ್ ಟ್ರಸ್ಟ್ (ರಿ) ಭಾರತೀನಗರ, ಮಂಡ್ಯ ಇವರಿಗೆ ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕಿನ ಕರಡಕೆರೆ ಗ್ರಾಮದ ಸ.ನಂ.91 ರಲ್ಲಿ 15.20 ಎಕರೆ/ಗುಂಟೆ ಜಮೀನನ್ನು ಮಂಜೂರು ಮಾಡಿದ್ದು; ಭೌತಿಕವಾಗಿ ಜಮೀನಿನ ವಿಸ್ತೀರ್ಣ ಕಡಿಮೆ ಇರುವುದರಿಂದ, ಹಾಲಿ ಸಂಸ್ಥೆಯ ಅನುಭವದಲ್ಲಿರುವ ಜಮೀನಿನ ವಿಸ್ತೀರ್ಣಕ್ಕೆ ಮಾತ್ರ ತಿದ್ದುಪಡಿ ಹೊರಡಿಸುವ ಬಗ್ಗೆ.

**ಓದಲಾಗಿದೆ:–** 1) ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ ರವರ ಪತ್ರ ಸಂಖ್ಯೆ: ಎಲ್‌ಎನ್‌ಡಿ(1)217/2010–11, ದಿನಾಂಕ 20.01.2014.

2) ಸರ್ಕಾರದ ಆದೇಶ ಸಂಖ್ಯೆ ಆರ್‌ಡಿ 27 ಎಲ್‌ಜಿವೈ 1986 ದಿನಾಂಕ: 15–11–1988

**ಪ್ರಸ್ತಾವನೆ:–**

ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು ಮಂಡ್ಯ ಜಿಲ್ಲೆ, ಮಂಡ್ಯ ರವರು ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕಿನ ಕರಡಕೆರೆ ಗ್ರಾಮದ ಸ.ನಂ. 91 ರಲ್ಲಿ 15–20 (15 ಎಕರೆ 20 ಗುಂಟೆ) ಜಮೀನನ್ನು ವಿದ್ಯಾಭಿವೃದ್ಧಿಗಾಗಿ ಶ್ರಮಿಸುತ್ತಿರುವ ಭಾರತಿ ಎಜುಕೇಶನ್ ಟ್ರಸ್ಟ್ (ರಿ) ಭಾರತೀನಗರ, ಮಂಡ್ಯ ಜಿಲ್ಲೆ ಇವರಿಗೆ ಮಂಜೂರು ಮಾಡಲಾಗಿದೆ ಹಾಗೂ ಸರ್ಕಾರಿ ಆದೇಶದಲ್ಲಿ ನಿಗದಿಪಡಿಸಿದ ದರದಂತೆ ಎಕರೆ ಒಂದಕ್ಕೆ ರೂ. 1,000–00 ದಂತೆ ಒಟ್ಟು ರೂ. 15,555–00 ಗಳನ್ನು ಕಿಮ್ಮತ್ತು ಪಾವತಿಸಿಕೊಂಡು ದಿನಾಂಕ 24–12–1988ರಲ್ಲಿ ಭಾರತಿ ಎಜುಕೇಶನ್ ಟ್ರಸ್ಟ್ (ರಿ) ಭಾರತೀನಗರ, ಮಂಡ್ಯ ಜಿಲ್ಲೆ ರವರಿಗೆ ಖಾಯಂ ಸಾಗುವಳಿ ಚೀಟಿಯನ್ನು ನೀಡಲಾಗಿದೆ.

ಮುಂದುವರೆದು, ಕಾರ್ಯದರ್ಶಿ, ಭಾರತಿ ಎಜುಕೇಶನ್ ಟ್ರಸ್ಟ್ (ರಿ) ಭಾರತೀನಗರ, ಮಂಡ್ಯ ಜಿಲ್ಲೆ ರವರು ತಮ್ಮ ಸಂಸ್ಥೆಗೆ ಮಂಜೂರು ಮಾಡಿರುವ ಕರಡಕೆರೆ ಗ್ರಾಮದ ಸ.ನಂ. 91 ರಲ್ಲಿನ 15.20 ಎಕರೆ ಜಮೀನಿನ ಪಕ್ಕಾ ಪೋಡಿ ಮಾಡಿಕೊಡುವಂತೆ ಕೋರಿರುತ್ತಾರೆ. ಅದರಂತೆ ಪಕ್ಕಾ ಪೋಡಿ ಮಾಡುವಾಗ ಭೌತಿಕವಾಗಿ 15 ಎಕರೆ 20 ಗುಂಟೆ ಜಮೀನಿನ ಬದಲಾಗಿ, ಕೇವಲ 13 ಎಕರೆ ಜಮೀನು ಮಾತ್ರ ಲಭ್ಯವಿದ್ದು; ಈ ಪೈಕಿ 1 ಎಕರೆ ಪ್ರದೇಶವು ಖರಾಬು ಜಮೀನಾಗಿರುತ್ತದೆ. ಉಳಿದ 12–00 ಎಕರೆ ವಿಸ್ತೀರ್ಣದ ಜಮೀನು ಮಾತ್ರ ಹಸನಾದ ಜಮೀನಾಗಿದ್ದು, ಸಂಸ್ಥೆಯ ಅನುಭವದಲ್ಲಿರುವುದು ಕಂಡು ಬಂದಿರುತ್ತದೆ. ಅದರಂತೆ ದಿನಾಂಕ 22–06–2010 ರಂದು ಸಂಸ್ಥೆಯ ಕಾರ್ಯದರ್ಶಿಗಳು ರೂ. 100–00ರ ಛಾಪಾ ಕಾಗದಲ್ಲಿ ಸಂಸ್ಥೆಯ ಅನುಭವದಲ್ಲಿರುವ 12–00 ಎಕರೆಗೆ ತಿದ್ದುಪಡಿ ಸಾಗುವಳಿ ಚೀಟಿ ಹಾಗೂ ಆರ್.ಟಿ.ಸಿ. ಬದಲಾವಣೆ ಮಾಡಿ ಸಂಬಂಧಪಟ್ಟ ಕಡತವನ್ನು ಭೂ ಮಾಪನ ಇಲಾಖೆಗೆ ಪಕ್ಕಾಪೋಡಿ ಕೆಲಸ ಪೂರೈಸಲು ಕಳುಹಿಸುವಂತೆ ಹಾಗೂ ಈಗಾಗಲೇ ಮಂಜೂರು ಮಾಡಿರುವ ಹೆಚ್ಚುವರಿ ಜಮೀನಿನ ಬಗ್ಗೆ ಯಾವುದೇ ಕಾರಣಕ್ಕೂ ಹೆಚ್ಚುವರಿ ಜಮೀನನ್ನು ಕೋರುವುದಿಲ್ಲವೆಂದು ಪ್ರಮಾಣಪತ್ರ ನೀಡಿರುತ್ತಾರೆ.

ಸರ್ಕಾರದ ಆದೇಶ ಸಂಖ್ಯೆ ಆರ್‌ಡಿ 27 ಎಲ್‌ಜಿವೈ 1986 ದಿನಾಂಕ 15–11–1988 ರಲ್ಲಿ 15 ಎಕರೆ 20 ಗುಂಟೆ ವಿಸ್ತೀರ್ಣ ಎಂದಿರುವುದನ್ನು; ಭೌತಿಕವಾಗಿ ಅನುಭವದಲ್ಲಿರುವ 12–00 ಎಕರೆ ವಿಸ್ತೀರ್ಣ ಎಂದು ತಿದ್ದುಪಡಿ ಆದೇಶ ಹೊರಡಿಸಿದ ನಂತರ ಮಾತ್ರ 12–00 ಎಕರೆ ವಿಸ್ತೀರ್ಣಕ್ಕೆ ಪಕ್ಕಾಪೋಡಿ ಮಾಡಿ ಕೊಡಲು ಸಾಧ್ಯವಾಗುವುದೆಂದು ತಿಳಿಸಿರುವ ಹಿನ್ನೆಲೆಯಲ್ಲಿ; ತಹಶೀಲ್ದಾರ್, ಮದ್ದೂರು ತಾಲ್ಲೂಕು ಇವರಿಂದ ವರದಿ ಪಡೆದು ಭಾರತಿ ಎಜುಕೇಶನ್ ಟ್ರಸ್ಟ್ (ರಿ) ಭಾರತೀನಗರ, ಮಂಡ್ಯ ಜಿಲ್ಲೆ ಇವರಿಗೆ ಸರ್ಕಾರದ ಆದೇಶ ಸಂಖ್ಯೆ ಆರ್‌ಡಿ 27 ಎಲ್‌ಜಿವೈ 1986 ದಿನಾಂಕ 15–11–1988 ರಲ್ಲಿ ಮದ್ದೂರು ತಾಲ್ಲೂಕಿನ ಕರಡಕೆರೆ ಗ್ರಾಮದ ಸ.ನಂ. 91 ರಲ್ಲಿ 15 ಎಕರೆ 20 ಗುಂಟೆ ವಿಸ್ತೀರ್ಣ ಎಂದಿರುವುದನ್ನು 12–00 ಎಕರೆ ಎಂದು ತಿದ್ದುಪಡಿ ಮಾಡಿ ಆದೇಶ ಹೊರಡಿಸುವಂತೆ ಜಿಲ್ಲಾಧಿಕಾರಿಗಳು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ:–

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 70 ಎಲ್‌ಜಿವೈ 2013(ಪಿ1), ದಿನಾಂಕ: 29.10.2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಿದ್ಯಾಭಿವೃದ್ಧಿಗಾಗಿ ಶ್ರಮಿಸುತ್ತಿರುವ ಭಾರತಿ ಎಜುಕೇಶನ್ ಟ್ರಸ್ಟ್ (ರಿ) ಭಾರತೀನಗರ, ಮಂಡ್ಯ ಜಿಲ್ಲೆ ಇವರಿಗೆ ಸರ್ಕಾರದ ಆದೇಶ ಸಂಖ್ಯೆ ಆರ್‌ಡಿ 27 ಎಲ್‌ಜಿವೈ 1986 ದಿನಾಂಕ 15–11–1988 ರಲ್ಲಿ ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕಿನ ಕರಡಕೆರೆ ಗ್ರಾಮದ ಸ.ನಂ. 91 ರಲ್ಲಿ 15 ಎಕರೆ 20 ಗುಂಟೆ ವಿಸ್ತೀರ್ಣದ ಜಮೀನನ್ನು ಮಂಜೂರು ಮಾಡಿರುವುದನ್ನು ಮಾರ್ಪಡಿಸಿ 12–00 ಎಕರೆ ವಿಸ್ತೀರ್ಣದ ಜಮೀನು ಎಂದು ತಿದ್ದುಪಡಿ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಉದಯ ಆರ್. ನಾಯಕ್**
ಪೀಠಾಧಿಕಾರಿ,
ಕಂದಾಯ ಇಲಾಖೆ (ಭೂ.ಮಂ–2)

PR. 681
SC.25

## ನಗರಾಭಿವೃದ್ಧಿ ಸಚಿವಾಲಯ

**ವಿಷಯಃ–** ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯಲ್ಲಿನ ಗ್ರೂಪ್ 'ಎ' ವೃಂದದ ಅಧಿಕಾರಿಗಳಿಗೆ ಮುಂಬಡ್ತಿ ನೀಡಲು ಇಲಾಖಾ ಮುಂಬಡ್ತಿ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:–**

1. ವನಇ 62 ಯು.ಡಬ್ಲ್ಯೂ.ಇ 1989, ಬೆಂಗಳೂರು ದಿನಾಂಕ: 23.04.1991,
2. ಸರ್ಕಾರದ ಆದೇಶ ಸಂಖ್ಯೆ: ಸಿ.ಆ.ಸು.ಇ 18 ಸೇ.ನೆ.ನಿ 2011, ದಿನಾಂಕ: 29.08.2011.
3. ಸರ್ಕಾರದ ಆದೇಶ ಸಂಖ್ಯೆ: ನಅಇ 61 ಯು.ಡಬ್ಲ್ಯೂ.ಇ 2015, ದಿನಾಂಕ: 10.09.2015.

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ (1)ರಲ್ಲಿ "ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಗ್ರೂಪ್ 'ಎ' ವೃಂದದ ಅಧಿಕಾರಿಗಳಿಗೆ ಮುಂಬಡ್ತಿ ನೀಡಲು ಸರ್ಕಾರದ ಕಾರ್ಯದರ್ಶಿ–2, ವಸತಿ ಮತ್ತು ನಗರಾಭಿವೃದ್ಧಿ ಇಲಾಖೆ ರವರ ಅಧ್ಯಕ್ಷತೆಯಲ್ಲಿ ಮತ್ತು ಸದಸ್ಯರುಗಳಾಗಿ

ಸರ್ಕಾರದ ಕಾರ್ಯದರ್ಶಿ, ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಇಲಾಖೆ, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಹಾಗೂ ಸದಸ್ಯ ಕಾರ್ಯದರ್ಶಿಯಾಗಿ ಸರ್ಕಾರದ ಉಪ ಕಾರ್ಯದರ್ಶಿ–3, ವಸತಿ ಮತ್ತು ನಗರಾಭಿವೃದ್ಧಿ ಇಲಾಖೆ ಇವರನ್ನು ಒಳಗೊಂಡಂತೆ ಇಲಾಖಾ ಮುಂಬಡ್ತಿ ಸಮಿತಿಯನ್ನು ರಚಿಸಲಾಗಿರುತ್ತದೆ. ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಇಲಾಖಾ ಮುಂಬಡ್ತಿ ಸಮಿತಿಗೆ ಮುಂಬಡ್ತಿಗೆ ಅರ್ಹರಿರುವ ಅಧಿಕಾರಿಗಳ ಪಟ್ಟಿಯೊಂದಿಗೆ ಸಂಪೂರ್ಣ ಮಾಹಿತಿ/ದಾಖಲೆಗಳನ್ನು ಒದಗಿಸುವುದು" ಎಂದು ತಿಳಿಸಲಾಗಿರುತ್ತದೆ.

ಪ್ರಸ್ತುತ ಸರ್ಕಾರದ ಹಂತದಲ್ಲಿ ಮೇಲ್ಕಂಡ ಉಲ್ಲೇಖ (1)ರ ಆದೇಶದಲ್ಲಿ ತಿಳಿಸಿರುವ ಹುದ್ದೆಗಳಲ್ಲಿ ಬದಲಾವಣೆಗಳು ಆಗಿರುವುದರಿಂದ ಹಾಗೂ ಸಿ.ಆ.ಸು ಇಲಾಖೆಯ ಉಲ್ಲೇಖ (2)ರಲ್ಲಿನ ಆದೇಶದಂತೆ ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ ಮುಂಬಡ್ತಿಯನ್ನು ಪರಿಗಣಿಸುವ ಉದ್ದೇಶಕ್ಕಾಗಿ ರಚಿಸಲಾದ ಇಲಾಖಾ ಮುಂಬಡ್ತಿ ಸಮಿತಿಗಳಲ್ಲಿ ಅದೇ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಪರಿಶಿಷ್ಠ ಜಾತಿ/ಪರಿಶಿಷ್ಠ ಪಂಗಡಕ್ಕೆ ಸೇರಿದ ಒಬ್ಬ ಅಧಿಕಾರಿಯನ್ನು ಸದಸ್ಯರನ್ನಾಗಿ ಸಂಬಂಧಿತ ಇಲಾಖಾ ಮುಖ್ಯಸ್ಥರು ನೇಮಕ ಮಾಡತಕ್ಕದ್ದು ಎಂದು ಸೂಚಿಸಿರುವ ಹಿನ್ನೆಲೆಯಲ್ಲಿ ಈಗಾಗಲೇ ಪರಿಶಿಷ್ಠ ಜಾತಿ/ಪರಿಶಿಷ್ಠ ಪಂಗಡದ ಸದಸ್ಯರಾಗಿ ಉಲ್ಲೇಖ (3)ರಲ್ಲಿ ಆದೇಶಿಸಲಾಗಿದೆ. ದಿನಾಂಕ: 23.04.1991ರ ಆದೇಶ ಬದಲಾವಣೆ ಆಗಿರುವ ಹಿನ್ನೆಲೆಯಲ್ಲಿ ಸದರಿ ಆದೇಶವನ್ನು ಈ ಕೆಳಕಂಡಂತೆ ಪರಿಷ್ಕರಿಸಿ, ಆದೇಶಿಸಲು ತೀರ್ಮಾನಿಸಿದೆ. ಅದರಂತೆ ಈ ಕೆಳಗಿನ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ನಅಇ 62 ಯು.ಡಬ್ಲ್ಯೂ.ಇ 2015, ಬೆಂಗಳೂರು, ದಿನಾಂಕ: 18.09.2015.**

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಇಲಾಖಾ ಮುಂಬಡ್ತಿ ಸಮಿತಿಗೆ ಈ ಕೆಳಕಂಡಂತಿರುತ್ತದೆ.

| | | |
|---|---|---|
| 1 | ಸರ್ಕಾರದ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ (ಪೌರಾಡಳಿತ ಮತ್ತು ನಗರಾಭಿವೃದ್ಧಿ ಪ್ರಾಧಿಕಾರಿಗಳು) | ಅಧ್ಯಕ್ಷರು |
| 2 | ವಿಶೇಷ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ | ಸದಸ್ಯರು |
| 3 | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ. | ಸದಸ್ಯರು |
| 4 | ಶ್ರೀ ಎಸ್. ಕೃಷ್ಣಪ್ಪ, ಇಂಜಿನಿಯರ್ ಇನ್ ಚೀಫ್, ಬೆಂಗಳೂರು ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ. | ಪರಿಶಿಷ್ಠ ಜಾತಿ ಪರಿಶಿಷ್ಠ ಪಂಗಡದ ಸದಸ್ಯರು |
| 5 | ಸರ್ಕಾರದ ಉಪ ಕಾರ್ಯದರ್ಶಿ–2, ನಗರಾಭಿವೃದ್ಧಿ ಇಲಾಖೆ. | ಸದಸ್ಯ –ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿ.ರಾಜೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**PR. 641**
**SC.25**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯಃ–** ಕೊಲಂಬಿಯಾ ಏಷ್ಯಾ ರೆಫರಲ್ ಆಸ್ಪತ್ರೆ, ಯಶವಂತಪುರ, ಬೆಂಗಳೂರು ಈ ಆಸ್ಪತ್ರೆಯಲ್ಲಿ ಮಾನವ ಅಂಗಾಂಗಗಳ ಮತ್ತು ಅಂಗಾಂಶಗಳ ಕಸಿ ಜೋಡಣೆಗಾಗಿ ಹೆಚ್ಚುವರಿ ಅಧಿಕಾರಿಯುಕ್ತ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:–**
1. ಸರ್ಕಾರದ ಆದೇಶ ಸಂಖ್ಯೆ: ಆಕುಕ 85 ಎಫ್‌ಪಿಆರ್ 2014, ದಿನಾಂಕ: 12.06.2014.
2. ಅಧ್ಯಕ್ಷರು ಕೊಲಂಬಿಯಾ ಏಷ್ಯಾ ರೆಫರಲ್ ಆಸ್ಪತ್ರೆ ಇವರ ಪತ್ರ ದಿನಾಂಕ: 18.06.2015.
3. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರ ಪತ್ರ ಸಂಖ್ಯೆ: ಜಂನಿ(ವೈ) ಮಾ.ಅ.ಕ.ಜೊ/03/2014–15, ದಿನಾಂಕ: 11.08.2015.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರಲ್ಲಿ ಕೇಂದ್ರ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯವು ಪ್ರಕಟಿಸಿರುವ Transplantation of Human Organs & Tissue rules 2014 ರ ನಿಯಮ 11(4) ಹಾಗೂ ನಿಯಮ 12ರಲ್ಲಿ ಅಗತ್ಯ ಪಡಿಸಿರುವಂತೆ ಕೊಲಂಬಿಯಾ ಏಷ್ಯಾ ರೆಫರಲ್ ಆಸ್ಪತ್ರೆ, ಯಶವಂತಪುರ, ಬೆಂಗಳೂರು ಆಸ್ಪತ್ರೆಯಲ್ಲಿ ಮಾನವ ಅಂಗಾಂಗಗಳ ಮತ್ತು ಅಂಗಾಂಶಗಳ ಕಸಿ ಜೋಡಣೆಗಾಗಿ ಹೆಚ್ಚುವರಿ ಅಧಿಕಾರಿಯುಕ್ತ ಸಮಿತಿಯನ್ನು ಪುನರ್ ರಚಿಸಿ ಆದೇಶ ಹೊರಡಿಸಲಾಗಿರುತ್ತದೆ. ಸದರಿ ಆದೇಶದಲ್ಲಿ ಈ ಆಸ್ಪತ್ರೆಯ ಹೆಚ್ಚುವರಿ ಅಧಿಕಾರಿಯುಕ್ತ ಸಮಿತಿಗೆ ಅಧ್ಯಕ್ಷರನ್ನಾಗಿ ಡಾ: ಅರವಿಂದ್ ಬಾಲಕೃಷ್ಣ ಕಾಸರಗೋಡು, ವೈದ್ಯಕೀಯ ನಿರ್ದೇಶಕರು, ಕೊಲಂಬಿಯಾ ಏಷ್ಯಾ ಆಸ್ಪತ್ರೆ, ಯಶವಂತಪುರ, ಬೆಂಗಳೂರು ಇವರನ್ನು ನೇಮಿಸಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (2)ರ ಪತ್ರದಲ್ಲಿ ಅಧ್ಯಕ್ಷರು ಕೊಲಂಬಿಯಾ ಏಷ್ಯಾ ರೆಫರಲ್ ಆಸ್ಪತ್ರೆ, ಯಶವಂತಪುರ, ಬೆಂಗಳೂರು ಇವರು ಮಾನವ ಅಂಗಾಂಗಗಳ ಮತ್ತು ಅಂಗಾಂಗಗಳ ಕಸಿ ಜೋಡಣೆಗಾಗಿ ಹೆಚ್ಚುವರಿ ಅಧಿಕಾರಯುಕ್ತ ಸಮಿತಿಗೆ ಅಧ್ಯಕ್ಷರಾಗಿ ನೇಮಕಗೊಂಡಿದ್ದ ಡಾ: ಅರವಿಂದ ಕಾಸರಗೋಡು ಅವರು ಈ ಸಮಿತಿಯ ಅಧ್ಯಕ್ಷ ಸ್ಥಾನಕ್ಕೆ ದಿನಾಂಕ: 30.04.2015ರಂದು ರಾಜೀನಾಮೆ ನೀಡಿರುತ್ತಾರೆ. ಸದರಿಯವರ ರಾಜೀನಾಮೆಯಿಂದ ತೆರವಾದ ಸ್ಥಳಕ್ಕೆ ಡಾ: ಕಾಂಚನ್ ಸನ್ಯಾಲ್, ವೈದ್ಯಕೀಯ ಸೇವೆಗಳ ಮುಖ್ಯಸ್ಥರು, ಕೊಲಂಬಿಯ ಏಷ್ಯಾ ರೆಫರಲ್ ಆಸ್ಪತ್ರೆ, ಯಶವಂತಪುರ, ಬೆಂಗಳೂರು ಇವರನ್ನು ನೇಮಿಸುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರು ಉಲ್ಲೇಖ(3)ರ ಪತ್ರದಲ್ಲಿ ಡಾ: ಕಾಂಚನ್ ಸನ್ಯಾಲ್, ಇವರನ್ನು ಸದರಿ ಸಮಿತಿಯ ಅಧ್ಯಕ್ಷರನ್ನಾಗಿ ನೇಮಿಸಿ ಆದೇಶ ಹೊರಡಿಸಲು ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 78 ಎಫ್ ಪಿಆರ್ 2015, ಬೆಂಗಳೂರು, ದಿನಾಂಕ: 16.09.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ Transplantation of Human Organs & Tissue rules 2014 ರ ನಿಯಮ 11(4) ಹಾಗೂ ನಿಯಮ 12ರಲ್ಲಿ ಅಗತ್ಯ ಪಡಿಸಿರುವಂತೆ ಹಾಗೂ ಮೇಲೆ ಓದಲಾದ ಕ್ರಮಾಂಕ (3)ರಲ್ಲಿನ ಪ್ರಸ್ತಾವನೆಯಂತೆ ಕೊಲಂಬಿಯಾ ಏಷ್ಯಾ ರೆಫರಲ್ ಆಸ್ಪತ್ರೆ, ಯಶವಂತಪುರ, ಬೆಂಗಳೂರು ಆಸ್ಪತ್ರೆಯಲ್ಲಿ ಮಾನವ ಅಂಗಾಂಗಗಳ ಮತ್ತು ಅಂಗಾಂಶಗಳ ಕಸಿ ಜೋಡಣೆಗಾಗಿ ಹೆಚ್ಚುವರಿ ಅಧಿಕಾರಿಯುಕ್ತ ಸಮಿತಿಯ ಅಧ್ಯಕ್ಷರನ್ನಾಗಿ ಡಾ: ಕಾಂಚನ್ ಸನ್ಯಾಲ್, ವೈದ್ಯಕೀಯ ಸೇವೆಗಳ ಮುಖ್ಯಸ್ಥರು, ಕೊಲಂಬಿಯಾ ಏಷ್ಯಾ ರೆಫರಲ್ ಆಸ್ಪತ್ರೆ, ಯಶವಂತಪುರ, ಬೆಂಗಳೂರು ಇವರನ್ನು ನೇಮಿಸಿ ಸಮಿತಿಯನ್ನು ಪುನರ್ ರಚಿಸಿ ಆದೇಶಿಸಿದೆ.

ಆದರೆ ದಿನಾಂಕ: 12.06.2014ರ ಆದೇಶ ಸಂಖ್ಯೆ: ಆಕುಕ 85 ಎಫ್‌ಪಿಆರ್ 2014ರಲ್ಲಿನ ಉಳಿದ ಸದಸ್ಯರ ಅಧಿಕಾರವಧಿಯು ಸದರಿ ಆದೇಶದಲ್ಲಿ ನಿಗಧಿಪಡಿಸಿದ ಅವಧಿಯವರೆಗೆ ಮಾತ್ರ ಮುಂದುವರೆಯತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಂದ್ರಹಾಸ ಗಂ.ತಾಳೂಕರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

PR. 617

SC.100

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** 2014–15 ನೇ ಸಾಲಿನಿಂದ ಸೇವಾನಿರತ ಸ್ನಾತಕೋತ್ತರ ವ್ಯಾಸಂಗ ಮಾಡುತ್ತಿರುವ ವೈದ್ಯರುಗಳಿಗೆ ಪ್ರತಿನಿಯೋಜನಾ ಸೌಲಭ್ಯವನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಆಕುಕ 252 ಹೆಚ್‌ಎಸ್‌ಹೆಚ್ 2014 ದಿನಾಂಕ:25.06.2014, 10.07.2014 ಮತ್ತು 24.07.2014

2) ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ಅವರ ಪತ್ರ ಸಂಖ್ಯೆ:ಜೆಆರ್‌ಒ (ಎಂ)/56/2014–15 ದಿನಾಂಕ: 22–09–2015

3) ಸರ್ಕಾರಿ ಆದೇಶ ಸಂಖ್ಯೆ: ಆಕುಕ 422 ಹೆಚ್‌ಎಸ್‌ಹೆಚ್ 2014 ದಿನಾಂಕ: 07/01/2015, 06.03.2015, 16/03/2015, 16/06/2015, 27/06/2015, 14/07/2015, 01/08/2015, 24/08/2015 ಮತ್ತು 29/09/2015

**ಪ್ರಸ್ತಾವನೆ:**

The Karnataka conduct of Entrance Test for selection and admission to Post Graduate Medical and Dental Degree and Diploma Courses Rules 2006 ರ ರೀತ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹಾಗೂ ದಂತ ಆರೋಗ್ಯಾಧಿಕಾರಿಗಳು ಸೇವಾನಿರತ ಕೋಟಾದಡಿ ಉನ್ನತ ವ್ಯಾಸಂಗ ಮಾಡಲು ನಿಯಮಗಳಲ್ಲಿ ಅವಕಾಶ ಕಲ್ಪಿಸಲಾಗಿದೆ. ಆ ಮೇರೆಗೆ ವೈದ್ಯಾಧಿಕಾರಿಗಳು ಪ್ರವೇಶ ಪರೀಕ್ಷೆಯಲ್ಲಿ ಗಳಿಸಿರುವ ಅಂಕ, ಅವರು ಸಲ್ಲಿಸಿರುವ ಗ್ರಾಮೀಣ ಸೇವೆ ಹಾಗೂ ಸೇವಾವಧಿಯ ಮೇಲೆ ಅಂಕಗಳನ್ನು ನೀಡಿ ತಯಾರಿಸಲ್ಪಟ್ಟ ಅರ್ಹತಾ ಪಟ್ಟಿಯ ಆಧಾರದ ಮೇಲೆ ಕೌನ್ಸಿಲಿಂಗ್‌ನಲ್ಲಿ ಭಾಗವಹಿಸಿ ತಜ್ಞತೆ ಮತ್ತು ಕಾಲೇಜುಗಳನ್ನು ಆಯ್ಕೆ ಮಾಡಿಕೊಂಡಿರುತ್ತಾರೆ.

ಆ ಮೇರೆಗೆ 2014–15ನೇ ಸಾಲಿನಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳನ್ನು ಸೇವಾನಿರತ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಿ ಮೇಲೆ ಕ್ರಮಾಂಕ (1) ರಲ್ಲಿ ಓದಲಾದಂತೆ ಸರ್ಕಾರದ ಆದೇಶಗಳನ್ನು ಹೊರಡಿಸಲಾಗಿತ್ತು.

ಈ ರೀತಿ ವ್ಯಾಸಂಗಕ್ಕೆ ನಿಯೋಜಿಸಲ್ಪಟ್ಟ ವೈದ್ಯಾಧಿಕಾರಿಗಳ ಪೈಕಿ 9 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ವ್ಯಾಸಂಗಕ್ಕೆ ಹಾಜರಾಗಿರುವ ಬಗ್ಗೆ ಸಿ.ಟಿ.ಸಿ, ನಮೂನೆ–19 ಮತ್ತು 19ಎ ರಲ್ಲಿ ಕರಾರು ಬಂಧಪತ್ರ ಹಾಗೂ ಪೆನಾಲ್ಟಿ ಬಾಂಡ್ ಸಲ್ಲಿಸಿರುವುದರಿಂದ ಈ ವೈದ್ಯರುಗಳಿಗೆ ಸೇವಾನಿರತ ಸ್ನಾತಕೋತ್ತರ ವ್ಯಾಸಂಗದ ಅವಧಿಗೆ ಪ್ರತಿನಿಯೋಜನಾ ಸೌಲಭ್ಯವನ್ನು ಮಂಜೂರು ಮಾಡುವಂತೆ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಅವರು ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಸೇವಾನಿರತ ವ್ಯಾಸಂಗಕ್ಕೆ ನಿಯೋಜಿಸಲ್ಪಟ್ಟು ಬಂಧಪತ್ರವನ್ನು ಸಲ್ಲಿಸಿದಂತಹ 121 ವೈದ್ಯಾಧಿಕಾರಿಗಳಿಗೆ ಈಗಾಗಲೇ ಪ್ರತಿನಿಯೋಜನಾ ಸೌಲಭ್ಯ ಮಂಜೂರು ಮಾಡಿ ಮೇಲೆ ಕ್ರಮಾಂಕ (3) ರಲ್ಲಿ ಓದಲಾದಂತೆ ಪ್ರತ್ಯೇಕ ಆದೇಶಗಳನ್ನು ಹೊರಡಿಸಲಾಗಿದೆ. ಪ್ರಸ್ತುತ, 5 ವರ್ಷಗಳ ಸರ್ಕಾರಿ ಸೇವೆ ಪೂರೈಸಿರುವ ವ್ಯಾಸಂಗ ನಿರತ 8 ವೈದ್ಯಾಧಿಕಾರಿಗಳಿಗೆ ವ್ಯಾಸಂಗದ ಅವಧಿಗೆ ಪ್ರತಿನಿಯೋಜನಾ ಸೌಲಭ್ಯವನ್ನು ಮಂಜೂರು ಮಾಡಲು ಸರ್ಕಾರವು ನಿರ್ಧರಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 422 ಹೆಚ್‌ಎಸ್‌ಹೆಚ್ 2014, ಬೆಂಗಳೂರು, ದಿನಾಂಕ: 15–10–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಈ ಆದೇಶದೊಂದಿಗೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಲಾದ 8 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳನ್ನು ಪ್ರಥಮ ಬಾರಿಗೆ ಸೇವಾನಿರತ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958 ನಿಯಮ 61 ರ ಅಪೆಂಡಿಕ್ಸ್ II–ಎ I ರನ್ವಯ ಅವರುಗಳಿಗೆ ವ್ಯಾಸಂಗದ ಅವಧಿಗೆ ಪ್ರತಿನಿಯೋಜನಾ ಸೌಲಭ್ಯವನ್ನು ಮಂಜೂರು ಮಾಡಿದೆ.

ಸೇವಾನಿರತ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾದ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ವ್ಯಾಸಂಗಕ್ಕೆ ಹಾಜರಾದ ದಿನಾಂಕದಿಂದ ಪ್ರತಿನಿಯೋಜನಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಸೇವಾನಿರತ ವ್ಯಾಸಂಗಕ್ಕೆ ನಿಯೋಜಿಸಲ್ಪಟ್ಟಿರುವ ಈ ವೈದ್ಯಾಧಿಕಾರಿಗಳು ಕರ್ನಾಟಕ ನಾಗರೀಕ ಸೇವಾ ನಿಯಮದಲ್ಲಿನ ಎಲ್ಲಾ ಷರತ್ತುಗಳನ್ನು ಪೂರೈಸಿರತಕ್ಕದ್ದು ಹಾಗೂ ಯಾವುದೇ ಸಂದರ್ಭದಲ್ಲಿ ನಿಯಮಗಳನ್ನು ಸಡಿಲಿಸಲಾಗುವುದಿಲ್ಲ ಎಂಬ ಷರತ್ತಿಗೆ ಒಳಪಟ್ಟಿದೆ.

ಸೇವಾನಿರತ ಸ್ನಾತಕೋತ್ತರ ವ್ಯಾಸಂಗ ಮಾಡುತ್ತಿರುವ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳಿಗೆ ವೇತನ ಮತ್ತು ಇತರೆ ಭತ್ಯೆಗಳನ್ನು ಬಟವಾಡೆ ಮಾಡುವ ಅಧಿಕಾರವನ್ನು ಈ ಕೆಳಕಂಡಂತೆ ನೀಡಿ ಆದೇಶಿಸಿದೆ.

(1) ಸ್ವಾಯತ್ತ ಸಂಸ್ಥೆ/ಖಾಸಗಿ ವೈದ್ಯಕೀಯ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿರುವ ಸೇವಾನಿರತ ವೈದ್ಯರುಗಳಿಗೆ ಸಂಬಂಧಿಸಿದ ಜಿಲ್ಲೆಯ ಜಿಲ್ಲಾ ಶಸ್ತ್ರ ಚಿಕಿತ್ಸಕರು; ಒಂದು ವೇಳೆ ಜಿಲ್ಲಾ ಶಸ್ತ್ರ ಚಿಕಿತ್ಸಕರ ಹುದ್ದೆಯು ಯಾವುದೇ ಕಾರಣದಿಂದ ಖಾಲಿಯಿದ್ದಲ್ಲಿ, ಸರ್ಕಾರಿ ಆದೇಶ ಸಂಖ್ಯೆ: ಆಕುಕ 34 ಹೆಚ್‌ಎಸ್‌ಹೆಚ್ 2012 ದಿನಾಂಕ: 18/01/2012 ರನ್ವಯ ಪ್ರತಿನಿಯೋಜನಾ ಸೌಲಭ್ಯವನ್ನು ವಿತರಿಸುವ ಅಧಿಕಾರವನ್ನು ಆಯಾ ಜಿಲ್ಲೆಯ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಯವರಿಗೆ ನೀಡಲಾಗಿದೆ.

(2) ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ಇಲ್ಲಿ ವ್ಯಾಸಂಗ ಮಾಡುತ್ತಿರುವ ಸೇವಾನಿರತ ವೈದ್ಯರುಗಳಿಗೆ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು;

ಈ ಆದೇಶವನ್ನು ಆರ್ಥಿಕ ಇಲಾಖೆಯು ಆದೇಶ ಸಂಖ್ಯೆ: ಆಇ 2 ಎಸ್ ಆರ್ ಎ 2008 ದಿನಾಂಕ: 05/06/2008 ರಲ್ಲಿ ಸರ್ಕಾರದ ಇಲಾಖಾ ಕಾರ್ಯದರ್ಶಿಗಳಿಗೆ ನೀಡಲಾಗಿರುವ ಪ್ರತ್ಯಾಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಎಸ್.ನಾಗರಾಜ್**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು)

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 422 ಹೆಚ್‌ಎಸ್‌ಹೆಚ್ 2014, ಬೆಂಗಳೂರು, ದಿನಾಂಕ: 15–10–2015 ಕ್ಕೆ ಅನುಬಂಧ**

| ಕ್ರ. ಸಂ. | ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹೆಸರು ಮತ್ತು ವ್ಯಾಸಂಗ ಪೂರ್ವದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸ್ಥಳ | ವೈದ್ಯಕೀಯ ಮಹಾವಿದ್ಯಾಲಯದ ಹೆಸರು | ವ್ಯಾಸಂಗದ ವಿಷಯ | ಸ್ನಾತಕೋತ್ತರ ವ್ಯಾಸಂಗಕ್ಕೆ ಹಾಜರಾದ ದಿನಾಂಕ |
|---|---|---|---|---|
| 1 | 2 | 3 | 4 | 5 |
| 1 | ಡಾ॥ ಲಡ್ವಾನ್ ಬಶೀರ ಖವಾಜ್ ಹುಸೈನ್ ಪ್ರಾ.ಆ.ಕೇಂದ್ರ, ಸಂಗಾಪುರ, ಗಂಗಾವತಿ ತಾ., ಕೊಪ್ಪಳ | ವಿಮ್ಸ್ ಬಳ್ಳಾರಿ | ಎಂಎಸ್ (ಒಬಿಜಿ) | 20–07–2014 |
| 2 | ಡಾ॥ ವಿಶ್ವನಾಥ ಕುರಿ ಪ್ರಾ.ಆ.ಕೇಂದ್ರ, ಬೆನ್ನೂರು, ಬಾಗಲಕೋಟೆ ತಾ॥ಜಿಲ್ಲೆ | ಇಎಸ್‌ಐ–ಪಿಜಿಐ–ಎಂಎಸ್‌ಆರ್, ರಾಜಾಜಿನಗರ, ಬೆಂಗಳೂರು | ಎಂಎಸ್ (ಜಿಎಸ್) | 01–08–2014 |
| 3 | ಡಾ॥ ಪುಟ್ಟಪ್ಪ ಎಸ್.ಆರ್. ಪ್ರಾ.ಆ.ಕೇಂದ್ರ, ಅಗಿಲೆ, ಹಾಸನ ತಾಲ್ಲೂಕು/ಜಿಲ್ಲೆ | ಎಂಎಂಸಿ, ಮೈಸೂರು | ಎಂಎಸ್ (ಒಬಿಜಿ) | 30–06–2014 |
| 4 | ಡಾ॥ ನವೀನ್ ಕುಮಾರ್ ಕೆ. ಪ್ರಾ.ಆ.ಕೇಂದ್ರ, ಸಿಂಧಿಕುರಬೇಟ್, ಗೋಕಾಕ್ ತಾಲ್ಲೂಕು, ಬೆಳಗಾವಿ ಜಿಲ್ಲೆ | ಕಿಮ್ಸ್, ಹುಬ್ಬಳ್ಳಿ | ಎಂಎಸ್ (ಜಿಎಸ್) | 09–07–2014 |
| 5 | ಡಾ॥ ಜಯರಾಂ ಪಿ.ಹೆಚ್. ಸಿ.ಜಿ.ಆಸ್ಪತ್ರೆ, ದಾವಣಗೆರೆ | ಕಿಮ್ಸ್, ಹುಬ್ಬಳ್ಳಿ | ಎಂಎಸ್ (ಆರ್ಥೋ) | 09–07–2014 |
| 6 | ಡಾ॥ ಗಾಯಕವಾಡ್ ಪ್ರಚೇತಿ ಸೋಪಾನ್ ಸ.ಆ.ಕೇಂದ್ರ, ಕಾಳಗಿ, ಚಿತ್ತಾಪುರ ತಾಲ್ಲೂಕು, ಕಲಬುರಗಿ | ಎಂಆರ್ ಎಂಸಿ, ಕಲಬುರಗಿ | ಎಂಎಸ್ (ಒಬಿಜಿ) | 07–07–2014 |
| 7 | ಡಾ॥ ಪಲ್ಲವಿ ಜಿ. ಪ್ರಾ.ಆ.ಕೇಂದ್ರ, ಎಸ್.ಆರ್.ಡಿ.ಪಾಳ್ಯ, ತಿಪಟೂರು ತಾಲ್ಲೂಕು, ತುಮಕೂರು ಜಿಲ್ಲೆ | ಕಸ್ತೂರ್ ಬಾ ಮೆಡಿಕಲ್ ಕಾಲೇಜು, ಮಂಗಳೂರು (ದ.ಕ.ಜಿಲ್ಲೆ) | ಡಿ.ಜಿ.ಓ. | 10–07–2014 |
| 8 | ಡಾ॥ ಕಾವೇರಿ ಶಾವಿ ಸ.ಆ.ಕೇಂದ್ರ, ಕಾರಟಗಿ, ಗಂಗಾವತಿ ತಾ: ಕೊಪ್ಪಳ | ವಿಮ್ಸ್ ಬಳ್ಳಾರಿ | ಎಂಎಸ್ (ಒಬಿಜಿ) | 04–07–2014 |

**ಬಿ.ಎಸ್.ನಾಗರಾಜ್**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು)

PR. 651

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ॥ ಶೈಲಾ ಜಿ., ಪ್ರಸೂತಿ ಮತ್ತು ಸ್ತ್ರೀರೋಗ ಹಿರಿಯ ತಜ್ಞರು, ಸಾರ್ವಜನಿಕ ಆಸ್ಪತ್ರೆ, ಕಲಘಟಗಿ, ಧಾರವಾಡ ಜಿಲ್ಲೆ ಅವರಿಗೆ ಸ್ವಇಚ್ಛಾ ನಿವೃತ್ತಿ ಹೊಂದಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಅವರ ಪತ್ರ ಸಂಖ್ಯೆ: ಜೆಆರ್‌ಒ(3)/10/2015–16 ದಿನಾಂಕ: 08/09/2015

**ಪ್ರಸ್ತಾವನೆ:**

ಡಾ॥ ಶೈಲಾ ಜಿ., ಪ್ರಸೂತಿ ಮತ್ತು ಸ್ತ್ರೀರೋಗ ಹಿರಿಯ ತಜ್ಞರು, ಸಾರ್ವಜನಿಕ ಆಸ್ಪತ್ರೆ, ಕಲಘಟಗಿ, ಧಾರವಾಡ ಜಿಲ್ಲೆ ಅವರು ದಿನಾಂಕ: 31/07/2015 ಅಥವಾ 30/09/2015 ರಿಂದ ಅನ್ವಯವಾಗುವಂತೆ ಸ್ವ ಇಚ್ಛಾ ನಿವೃತ್ತಿ ಹೊಂದಲು ಅನುಮತಿ ಕೋರಿ ದಿನಾಂಕ:23/05/2015 ರಂದು ಮನವಿ ಸಲ್ಲಿಸಿರುತ್ತಾರೆ. ಈ ವೈದ್ಯಾಧಿಕಾರಿಯವರು 24 ವರ್ಷಗಳಿಗೂ ಮೀರಿ ಸರ್ಕಾರಿ ಸೇವೆ ಸಲ್ಲಿಸಿದ್ದು, ಅವರಿಂದ ಸರ್ಕಾರಕ್ಕೆ ಯಾವುದೇ ಬಾಕಿ ಬರಬೇಕಾಗಿಲ್ಲ ಮತ್ತು ಬಂಧಪತ್ರದ ಅವಧಿಯನ್ನು ಪೂರೈಸಿರುತ್ತಾರೆ ಹಾಗೂ ಅವರ ವಿರುದ್ಧ ಇಲಾಖಾ ವಿಚಾರಣೆಗಳು ಬಾಕಿ ಇರುವುದಿಲ್ಲವೆಂದು ತಿಳಿಸುತ್ತಾ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 285 (1)(ಎ) ಪ್ರಕಾರ ದಿನಾಂಕ: 30/09/2015 ರಿಂದ ಅಥವಾ ಆದೇಶ ಹೊರಡಿಸಿದ ದಿನಾಂಕಕ್ಕೆ ಅನ್ವಯಿಸಿ ಸ್ವ–ಇಚ್ಛಾ ನಿವೃತ್ತಿ ಹೊಂದಲು ಅನುಮತಿ ನೀಡುವಂತೆ ಕೋರಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಅವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 374 ಹೆಚ್ಎಸ್ಹೆಚ್ 2015, ಬೆಂಗಳೂರು ದಿನಾಂಕ: 30–09–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಡಾ॥ ಶೈಲಾ ಜಿ., ಪ್ರಸೂತಿ ಮತ್ತು ಸ್ತ್ರೀರೋಗ ಹಿರಿಯ ತಜ್ಞರು, ಸಾರ್ವಜನಿಕ ಆಸ್ಪತ್ರೆ, ಕಲಘಟಗಿ, ಧಾರವಾಡ ಜಿಲ್ಲೆ ಅವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 285 (1)(ಎ) ಪ್ರಕಾರ ದಿನಾಂಕ: 30–09–2015 ರಿಂದ ಜಾರಿಗೆ ಬರುವಂತೆ ಸ್ವ–ಇಚ್ಛಾ ನಿವೃತ್ತಿ ಹೊಂದಲು ಸರ್ಕಾರವು ಅನುಮತಿಯನ್ನು ನೀಡಿದೆ.

ಈ ಅನುಮತಿಯು ಸದರಿ ವೈದ್ಯಾಧಿಕಾರಿಗಳಿಂದ ಮನೆಕಟ್ಟುವ/ವಾಹನ ಖರೀದಿ ಮುಂಗಡ ಇತ್ಯಾದಿ ಯಾವುದೇ ಸರ್ಕಾರಕ್ಕೆ ಬಾಕಿ ಇದ್ದಲ್ಲಿ ಅವರ ನಿವೃತ್ತಿ ಉಪದಾನಗಳಿಂದ ಕಡಿತಗೊಳಿಸಲಾಗುವುದೆಂಬ ಷರತ್ತಿಗೊಳಪಟ್ಟಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಎಸ್.ನಾಗರಾಜ್**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು)

**PR. 634**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** 2014–15 ನೇ ಸಾಲಿನಿಂದ ಸೇವಾನಿರತ ಸ್ನಾತಕೋತ್ತರ ವ್ಯಾಸಂಗ ಮಾಡುತ್ತಿರುವ ವೈದ್ಯರುಗಳಿಗೆ ಪ್ರತಿನಿಯೋಜನಾ ಸೌಲಭ್ಯವನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಆಕುಕ 252 ಹೆಚ್ಎಸ್ಹೆಚ್ 2014 ದಿನಾಂಕ:25.06.2014, 10.07.2014 ಮತ್ತು 24.07.2014

2) ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ಅವರ ಪತ್ರ ಸಂಖ್ಯೆ:ಜೆಆರ್ಓ (ಎಂ)/56/2014–15 ದಿನಾಂಕ: 22–09–2015

3) ಸರ್ಕಾರಿ ಆದೇಶ ಸಂಖ್ಯೆ: ಆಕುಕ 422 ಹೆಚ್ಎಸ್ಹೆಚ್ 2014 ದಿನಾಂಕ: 07/01/2015, 06.03.2015, 16/03/2015, 16/06/2015, 27/06/2015, 14/07/2015, 01/08/2015 ಮತ್ತು 24/08/2015

**ಪ್ರಸ್ತಾವನೆ:**

**The Karnataka conduct of Entrance Test for selection and admission to Post Graduate Medical and Dental Degree and Diploma Courses Rules 2006** ರ ರೀತ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹಾಗೂ ದಂತ ಆರೋಗ್ಯಾಧಿಕಾರಿಗಳು ಸೇವಾನಿರತ ಕೋಟಾದಡಿ ಉನ್ನತ ವ್ಯಾಸಂಗ ಮಾಡಲು ನಿಯಮಗಳಲ್ಲಿ ಅವಕಾಶ ಕಲ್ಪಿಸಲಾಗಿದೆ. ಆ ಮೇರೆಗೆ ವೈದ್ಯಾಧಿಕಾರಿಗಳು ಪ್ರವೇಶ ಪರೀಕ್ಷೆಯಲ್ಲಿ ಗಳಿಸಿರುವ ಅಂಕ, ಅವರು ಸಲ್ಲಿಸಿರುವ ಗ್ರಾಮೀಣ ಸೇವೆ ಹಾಗೂ ಸೇವಾವಧಿಯ ಮೇಲೆ ಅಂಕಗಳನ್ನು ನೀಡಿ ತಯಾರಿಸಲ್ಪಟ್ಟ ಅರ್ಹತಾ ಪಟ್ಟಿಯ ಆಧಾರದ ಮೇಲೆ ಕೌನ್ಸಿಲಿಂಗ್‌ನಲ್ಲಿ ಭಾಗವಹಿಸಿ ತಜ್ಞತೆ ಮತ್ತು ಕಾಲೇಜುಗಳನ್ನು ಆಯ್ಕೆ ಮಾಡಿಕೊಂಡಿರುತ್ತಾರೆ.

ಆ ಮೇರೆಗೆ 2014–15ನೇ ಸಾಲಿನಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳನ್ನು ಸೇವಾನಿರತ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಿ ಮೇಲೆ ಕ್ರಮಾಂಕ (1) ರಲ್ಲಿ ಓದಲಾದಂತೆ ಸರ್ಕಾರದ ಆದೇಶಗಳನ್ನು ಹೊರಡಿಸಲಾಗಿತ್ತು.

ಈ ರೀತಿ ವ್ಯಾಸಂಗಕ್ಕೆ ನಿಯೋಜಿಸಲ್ಪಟ್ಟ ವೈದ್ಯಾಧಿಕಾರಿಗಳ ಪೈಕಿ 7 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ವ್ಯಾಸಂಗಕ್ಕೆ ಹಾಜರಾಗಿರುವ ಬಗ್ಗೆ ಸಿ.ಟಿ.ಸಿ, ನಮೂನೆ–19 ಮತ್ತು 19ಎ ರಲ್ಲಿ ಕರಾರು ಬಂಧಪತ್ರ ಹಾಗೂ ಪೆನಾಲ್ಟಿ ಬಾಂಡ್ ಸಲ್ಲಿಸಿರುವುದರಿಂದ ಈ ವೈದ್ಯರುಗಳಿಗೆ ಸೇವಾನಿರತ ಸ್ನಾತಕೋತ್ತರ ವ್ಯಾಸಂಗದ ಅವಧಿಗೆ ಪ್ರತಿನಿಯೋಜನಾ ಸೌಲಭ್ಯವನ್ನು ಮಂಜೂರು ಮಾಡುವಂತೆ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಅವರು ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಸೇವಾನಿರತ ವ್ಯಾಸಂಗಕ್ಕೆ ನಿಯೋಜಿಸಲ್ಪಟ್ಟು ಬಂಧಪತ್ರವನ್ನು ಸಲ್ಲಿಸಿದಂತಹ 115 ವೈದ್ಯಾಧಿಕಾರಿಗಳಿಗೆ ಈಗಾಗಲೇ ಪ್ರತಿನಿಯೋಜನಾ ಸೌಲಭ್ಯ ಮಂಜೂರು ಮಾಡಿ ಮೇಲೆ ಕ್ರಮಾಂಕ (3) ರಲ್ಲಿ ಓದಲಾದಂತೆ ಪ್ರತ್ಯೇಕ ಆದೇಶಗಳನ್ನು ಹೊರಡಿಸಲಾಗಿದೆ. ಪ್ರಸ್ತುತ, 5 ವರ್ಷಗಳ ಸರ್ಕಾರಿ ಸೇವೆ ಪೂರೈಸಿರುವ ವ್ಯಾಸಂಗ ನಿರತ 6 ವೈದ್ಯಾಧಿಕಾರಿಗಳಿಗೆ ವ್ಯಾಸಂಗದ ಅವಧಿಗೆ ಪ್ರತಿನಿಯೋಜನಾ ಸೌಲಭ್ಯವನ್ನು ಮಂಜೂರು ಮಾಡಲು ಸರ್ಕಾರವು ನಿರ್ಧರಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 422 ಹೆಚ್‌ಎಸ್‌ಹೆಚ್ 2014, ಬೆಂಗಳೂರು, ದಿನಾಂಕ: 29–09–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಈ ಆದೇಶದೊಂದಿಗೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಲಾದ 6 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳನ್ನು ಪ್ರಥಮ ಬಾರಿಗೆ ಸೇವಾನಿರತ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958 ನಿಯಮ 61 ರ ಅಪೆಂಡಿಕ್ಸ್ II–ಎ । ರನ್ವಯ ಅವರುಗಳಿಗೆ ವ್ಯಾಸಂಗದ ಅವಧಿಗೆ ಪ್ರತಿನಿಯೋಜನಾ ಸೌಲಭ್ಯವನ್ನು ಮಂಜೂರು ಮಾಡಿದೆ.

ಸೇವಾನಿರತ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾದ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ವ್ಯಾಸಂಗಕ್ಕೆ ಹಾಜರಾದ ದಿನಾಂಕದಿಂದ ಪ್ರತಿನಿಯೋಜನಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಸೇವಾನಿರತ ವ್ಯಾಸಂಗಕ್ಕೆ ನಿಯೋಜಿಸಲ್ಪಟ್ಟಿರುವ ಈ ವೈದ್ಯಾಧಿಕಾರಿಗಳು ಕರ್ನಾಟಕ ನಾಗರೀಕ ಸೇವಾ ನಿಯಮದಲ್ಲಿನ ಎಲ್ಲಾ ಷರತ್ತುಗಳನ್ನು ಪೂರೈಸಿರತಕ್ಕದ್ದು ಹಾಗೂ ಯಾವುದೇ ಸಂದರ್ಭದಲ್ಲಿ ನಿಯಮಗಳನ್ನು ಸಡಿಲಿಸಲಾಗುವುದಿಲ್ಲ ಎಂಬ ಷರತ್ತಿಗೆ ಒಳಪಟ್ಟಿದೆ.

ಸೇವಾನಿರತ ಸ್ನಾತಕೋತ್ತರ ವ್ಯಾಸಂಗ ಮಾಡುತ್ತಿರುವ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳಿಗೆ ವೇತನ ಮತ್ತು ಇತರೆ ಭತ್ಯೆಗಳನ್ನು ಬಟವಾಡೆ ಮಾಡುವ ಅಧಿಕಾರವನ್ನು ಈ ಕೆಳಕಂಡಂತೆ ನೀಡಿ ಆದೇಶಿಸಿದೆ.

(1) ಸ್ವಾಯತ್ತ ಸಂಸ್ಥೆ/ಖಾಸಗಿ ವೈದ್ಯಕೀಯ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿರುವ ಸೇವಾನಿರತ ವೈದ್ಯರುಗಳಿಗೆ ಸಂಬಂಧಿಸಿದ ಜಿಲ್ಲೆಯ ಜಿಲ್ಲಾ ಶಸ್ತ್ರ ಚಿಕಿತ್ಸಕರು ; ಒಂದು ವೇಳೆ ಜಿಲ್ಲಾ ಶಸ್ತ್ರ ಚಿಕಿತ್ಸಕರ ಹುದ್ದೆಯು ಯಾವುದೇ ಕಾರಣದಿಂದ ಖಾಲಿಯಿದ್ದಲ್ಲಿ, ಸರ್ಕಾರಿ ಆದೇಶ ಸಂಖ್ಯೆ: ಆಕುಕ 34 ಹೆಚ್‌ಎಸ್‌ಹೆಚ್ 2012 ದಿನಾಂಕ: 18/01/2012 ರನ್ವಯ ಪ್ರತಿನಿಯೋಜನಾ ಸೌಲಭ್ಯವನ್ನು ವಿತರಿಸುವ ಅಧಿಕಾರವನ್ನು ಆಯಾ ಜಿಲ್ಲೆಯ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಯವರಿಗೆ ನೀಡಲಾಗಿದೆ.

(2) ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ಇಲ್ಲಿ ವ್ಯಾಸಂಗ ಮಾಡುತ್ತಿರುವ ಸೇವಾನಿರತ ವೈದ್ಯರುಗಳಿಗೆ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು;

ಈ ಆದೇಶವನ್ನು ಆರ್ಥಿಕ ಇಲಾಖೆಯು ಆದೇಶ ಸಂಖ್ಯೆ: ಆಇ 2 ಎಸ್ ಆರ್ ಎ 2008 ದಿನಾಂಕ: 05/06/2008 ರಲ್ಲಿ ಸರ್ಕಾರದ ಇಲಾಖಾ ಕಾರ್ಯದರ್ಶಿಗಳಿಗೆ ನೀಡಲಾಗಿರುವ ಪ್ರತ್ಯಾಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಎಸ್.ನಾಗರಾಜ್**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು)

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 422 ಹೆಚ್‌ಎಸ್‌ಹೆಚ್ 2014, ಬೆಂಗಳೂರು, ದಿನಾಂಕ: 29.09.2015 ಕ್ಕೆ ಅನುಬಂಧ**

| ಕ್ರ. ಸಂ. | ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹೆಸರು ಮತ್ತು ವ್ಯಾಸಂಗ ಪೂರ್ವದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸ್ಥಳ | ವೈದ್ಯಕೀಯ ಮಹಾವಿದ್ಯಾಲಯದ ಹೆಸರು | ವ್ಯಾಸಂಗದ ವಿಷಯ | ಸ್ನಾತಕೋತ್ತರ ವ್ಯಾಸಂಗಕ್ಕೆ ಹಾಜರಾದ ದಿನಾಂಕ |
|---|---|---|---|---|
| 1 | 2 | 3 | 4 | 5 |
| 1 | ಡಾ॥ ಎಲ್.ಆರ್.ಶಂಕರ ನಾಯ್ಕ್ ಪ್ರಾ.ಆ.ಕೇಂದ್ರ, ಚಿತ್ತವಾಡಗಿ, ಬಳ್ಳಾರಿ ಜಿಲ್ಲೆ | ಎಂ.ಆರ್.ಎಂ.ಸಿ., ಕಲಬುರಗಿ | ಎಂಎಸ್ (ಇ.ಎನ್.ಟಿ. | 17–07–2014 |
| 2 | ಡಾ॥ ರವಿರಾಜ್ ಕರಿಯಪ್ಪ ಶೇಟ್ ಪ್ರಾ.ಆ.ಕೇಂದ್ರ, ಶಿರಾಲಿ, ಭಟ್ಕಳ ತಾ॥, ಉತ್ತರ ಕನ್ನಡ ಜಿಲ್ಲೆ | ಎಸ್.ಡಿ.ಎಂ.ವೈದ್ಯಕೀಯ ಕಾಲೇಜು, ಧಾರವಾಡ | ಡಿ.ಜಿ.ಓ, | 16–07–2014 |
| 3 | ಡಾ॥ ಭಾನಮತಿ ಪಿ.ಎಂ. ಪ್ರಾ.ಆ.ಕೇಂದ್ರ, ಮುದಲಹಿಪ್ಪೆ, ಹಾಸನ ಜಿಲ್ಲೆ | ಎಂಎಂಸಿ, ಮೈಸೂರು | ಡಿ.ಜಿ.ಓ | 14.07.2014 |
| 4 | ಡಾ॥ ಬಸವರಾಜ್ ಎನ್ ಬಾಸೂರ್ ಪ್ರಾ.ಆ.ಕೇಂದ್ರ, ಮುಕ್ಕಲ್, ಕಲಘಟಗಿ ತಾಲ್ಲೂಕು, ಧಾರವಾಡ ಜಿಲ್ಲೆ | ಕಿಮ್ಸ್ ಹುಬ್ಬಳ್ಳಿ | ಎಂಎಸ್ (ಜಿಎಸ್) | 11–07–2014 |
| 5 | ಡಾ॥ ಕಿರಣ್ ಡಿ. ಪ್ರಾ.ಆ ಕೇಂದ್ರ, ಗಾದಿಗನೂರು, ಬಳ್ಳಾರಿ ಜಿಲ್ಲೆ | ವಿಮ್ಸ್, ಬಳ್ಳಾರಿ | ಎಂಡಿ(ಜಿಎಂ) | 01–07–2014 |
| 6 | ಡಾ॥ ಶ್ರೀನಿವಾಸಮೂರ್ತಿ ಎಂ.ಎಸ್. ಪ್ರಾ.ಆ.ಕೇಂದ್ರ, ಉತ್ತಮೇಶ್ವರ, ಕೊಪ್ಪ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ | ಶ್ಯಾಮರಾವ್ ಶಿವಶಂಕರಪ್ಪ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ದಾವಣಗೆರೆ | ಎಂಎಸ್ (ಆರ್ಥೋ) | 14–07–2014 |

**ಬಿ.ಎಸ್.ನಾಗರಾಜ್**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು)

PR. 635

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** 2015–16 ನೇ ಶೈಕ್ಷಣಿಕ ಸಾಲಿನಿಂದ ಸೇವಾನಿರತ ಸ್ನಾತಕೋತ್ತರ ವ್ಯಾಸಂಗ ಮಾಡುತ್ತಿರುವ ದಂತ ಆರೋಗ್ಯಾಧಿಕಾರಿಗಳಿಗೆ ಪ್ರತಿನಿಯೋಜನಾ ಸೌಲಭ್ಯ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಆಕುಕ 67 ಹೆಚ್‌ಎಸ್‌ಡಿ 2015(ಭಾಗ) ದಿನಾಂಕ: 07.09.2015

2) ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ:ಜೆಆರ್‌ಓ (5)/ (ಎಲ್‌ಆರ್‌ಓ–33 ಭಾಗ)/2015–16 ದಿನಾಂಕ: 07–09–2015

**ಪ್ರಸ್ತಾವನೆ:**

**The Karnataka conduct of Entrance Test for selection and admission to Post Graduate Medical and Dental Degree and Diploma Courses Rules 2006** ರ ರೀತ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹಾಗೂ ದಂತ ಆರೋಗ್ಯಾಧಿಕಾರಿಗಳಿಗೆ ಸೇವಾನಿರತ ಕೋಟಾದಡಿ ಉನ್ನತ ವ್ಯಾಸಂಗ ಮಾಡಲು ನಿಯಮಗಳಲ್ಲಿ ಅವಕಾಶ ಕಲ್ಪಿಸಲಾಗಿದೆ. ಆ ಮೇರೆಗೆ ವೈದ್ಯಾಧಿಕಾರಿಗಳು ಪ್ರವೇಶ ಪರೀಕ್ಷೆಯಲ್ಲಿ ಗಳಿಸಿರುವ ಅಂಕ, ಅವರು ಸಲ್ಲಿಸಿರುವ ಗ್ರಾಮೀಣ ಸೇವೆ ಹಾಗೂ ಸೇವಾವಧಿಯ ಮೇಲೆ ಅಂಕಗಳನ್ನು ನೀಡಿ ತಯಾರಿಸಲ್ಪಟ್ಟ ಅರ್ಹತಾ ಪಟ್ಟಿಯ ಆಧಾರದ ಮೇಲೆ ಕೌನ್ಸಿಲಿಂಗ್‌ನಲ್ಲಿ ಭಾಗವಹಿಸಿ ತಜ್ಞತೆ ಮತ್ತು ಕಾಲೇಜುಗಳನ್ನು ಆಯ್ಕೆ ಮಾಡಿಕೊಳ್ಳುತ್ತಾರೆ.

ಆ ಮೇರೆಗೆ 2015–16ನೇ ಸಾಲಿನಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ 8 ದಂತ ಆರೋಗ್ಯಾಧಿಕಾರಿಗಳನ್ನು ಸೇವಾನಿರತ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಿ ಮೇಲೆ ಕ್ರಮಾಂಕ (1) ರಲ್ಲಿ ಓದಲಾದಂತೆ ಆದೇಶವನ್ನು ಹೊರಡಿಸಲಾಗಿತ್ತು.

ಈ ರೀತಿ ವ್ಯಾಸಂಗಕ್ಕೆ ನಿಯೋಜಿಸಲ್ಪಟ್ಟ 8 ದಂತ ಆರೋಗ್ಯಾಧಿಕಾರಿಗಳು ವ್ಯಾಸಂಗಕ್ಕೆ ಹಾಜರಾಗಿರುವ ಬಗ್ಗೆ ಸಿ.ಟಿ.ಸಿ, ನಮೂನೆ–19 ಮತ್ತು ನಮೂನೆ–19ಎ ರಲ್ಲಿ ಕರಾರು ಬಂಧಪತ್ರ ಹಾಗೂ ಪೆನಾಲ್ಟಿ ಬಾಂಡ್ ಸಲ್ಲಿಸಿರುವುದರಿಂದ ಅವರುಗಳಿಗೆ ಸೇವಾನಿರತ ಸ್ನಾತಕೋತ್ತರ ವ್ಯಾಸಂಗದ ಅವಧಿಗೆ ಪ್ರತಿನಿಯೋಜನಾ ಸೌಲಭ್ಯವನ್ನು ಮಂಜೂರು ಮಾಡುವಂತೆ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಅವರು ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಸೇವಾನಿರತ ಸ್ನಾತಕೋತ್ತರ ವ್ಯಾಸಂಗ ಮಾಡುತ್ತಿರುವ 8 ದಂತ ಆರೋಗ್ಯಾಧಿಕಾರಿಗಳು ಬಂಧಪತ್ರಗಳನ್ನು ಸಲ್ಲಿಸಿರುವುದರಿಂದ ಅವರುಗಳಿಗೆ ವ್ಯಾಸಂಗದ ಅವಧಿಗೆ ಪ್ರತಿನಿಯೋಜನಾ ಸೌಲಭ್ಯವನ್ನು ಮಂಜೂರು ಮಾಡಲು ಸರ್ಕಾರವು ನಿರ್ಧರಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 104 ಹೆಚ್‌ಎಸ್‌ಡಿ 2015, ಬೆಂಗಳೂರು, ದಿನಾಂಕ: 22–09–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2015–16 ನೇ ಸಾಲಿನಲ್ಲಿ ಸೇವಾನಿರತ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಲಾಗಿರುವ ಈ ಆದೇಶದ ಅನುಬಂಧದಲ್ಲಿ ನಮೂದಿಸಲಾದ 8 ದಂತ ಆರೋಗ್ಯಾಧಿಕಾರಿಗಳಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958 ನಿಯಮ 61 ರ ಅಪೆಂಡಿಕ್ಸ್ II–ಎ I ರನ್ವಯ ವ್ಯಾಸಂಗದ ಅವಧಿಗೆ ಪ್ರತಿನಿಯೋಜನಾ ಸೌಲಭ್ಯವನ್ನು ಮಂಜೂರು ಮಾಡಿದೆ. ಇದೇ ನಿಯಮ ಅಪೆಂಡಿಕ್ಸ್ II–ಎ (7) ರನ್ವಯ ಈ ನಿಯೋಜನೆಗೆ ವೈದ್ಯಾಧಿಕಾರಿಗಳು ಅರ್ಹರಿದ್ದಾರೆ ಎಂಬುದನ್ನು ಖಚಿತಪಡಿಸಿಕೊಳ್ಳತಕ್ಕದ್ದು.

ಸೇವಾನಿರತ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾದ ಆರೋಗ್ಯಾಧಿಕಾರಿಗಳು ವ್ಯಾಸಂಗಕ್ಕೆ ಹಾಜರಾದ ದಿನಾಂಕದಿಂದ ಪ್ರತಿನಿಯೋಜನಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಸೇವಾನಿರತ ಸ್ನಾತಕೋತ್ತರ ವ್ಯಾಸಂಗ ಮಾಡುತ್ತಿರುವ ದಂತ ಆರೋಗ್ಯಾಧಿಕಾರಿಗಳಿಗೆ ವೇತನ ಮತ್ತು ಇತರೆ ಭತ್ಯೆಗಳನ್ನು ಬಟವಾಡೆ ಮಾಡುವ ಅಧಿಕಾರವನ್ನು ಈ ಕೆಳಕಂಡಂತೆ ನೀಡಿ ಆದೇಶಿಸಿದೆ.

(ಅ) ಸ್ವಾಯತ್ತ ಸಂಸ್ಥೆ/ಖಾಸಗಿ ವೈದ್ಯಕೀಯ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿರುವ ಸೇವಾನಿರತ ವೈದ್ಯರುಗಳಿಗೆ ಸಂಬಂಧಿಸಿದ ಜಿಲ್ಲೆಯ ಜಿಲ್ಲಾ ಶಸ್ತ್ರ ಚಿಕಿತ್ಸಕರು ; ಒಂದು ವೇಳೆ ಜಿಲ್ಲಾ ಶಸ್ತ್ರ ಚಿಕಿತ್ಸಕರ ಹುದ್ದೆಯು ಯಾವುದೇ ಕಾರಣದಿಂದ ಖಾಲಿಯಿದ್ದಲ್ಲಿ, ಸರ್ಕಾರಿ ಆದೇಶ ಸಂಖ್ಯೆ: ಆಕುಕ 34 ಹೆಚ್‌ಎಸ್‌ಹೆಚ್ 2012 ದಿನಾಂಕ: 18/01/2012 ರನ್ವಯ ಪ್ರತಿನಿಯೋಜನಾ ಸೌಲಭ್ಯವನ್ನು ವಿತರಿಸುವ ಅಧಿಕಾರವನ್ನು ಆಯಾ ಜಿಲ್ಲೆಯ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಯವರಿಗೆ ನೀಡಲಾಗಿದೆ.

(ಆ) ಸರ್ಕಾರಿ ದಂತ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ಇಲ್ಲಿ ವ್ಯಾಸಂಗ ಮಾಡುತ್ತಿರುವ ಸೇವಾನಿರತ ವೈದ್ಯರುಗಳಿಗೆ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ;

ಈ ಆದೇಶವನ್ನು ಆರ್ಥಿಕ ಇಲಾಖೆಯು ಆದೇಶ ಸಂಖ್ಯೆ: ಆಇ 2 ಎಸ್ ಆರ್ ಎ 2008 ದಿನಾಂಕ: 05/06/2008 ರಲ್ಲಿ ಸರ್ಕಾರದ ಇಲಾಖಾ ಕಾರ್ಯದರ್ಶಿಯವರಿಗೆ ನೀಡಲಾಗಿರುವ ಪ್ರತ್ಯಾಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಎಸ್.ನಾಗರಾಜ್**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು)

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 104 ಹೆಚ್‌ಎಸ್‌ಡಿ 2015, ಬೆಂಗಳೂರು, ದಿನಾಂಕ: 22–09–2015 ಕ್ಕೆ ಅನುಬಂಧ**

| ಕ್ರ.ಸಂ. | ದಂತ ಆರೋಗ್ಯಾಧಿಕಾರಿ ಹೆಸರು ಮತ್ತು ಈ ಹಿಂದೆ ಕಾರ್ಯನಿರ್ವಹಿಸುತ್ತಿದ್ದ ಸ್ಥಳ | ವ್ಯಾಸಂಗಕ್ಕೆ ನಿಯೋಜಿಸಲಾದ ಸರ್ಕಾರದ ಅಧಿಸೂಚನೆ ಸಂಖ್ಯೆ ಮತ್ತು ದಿನಾಂಕ | ವ್ಯಾಸಂಗದ ವಿಷಯ ಮತ್ತು ವೈದ್ಯಕೀಯ ಮಹಾವಿದ್ಯಾಲಯದ ಹೆಸರು | ಸ್ನಾತಕೋತ್ತರ ವ್ಯಾಸಂಗಕ್ಕೆ ಹಾಜರಾದ ದಿನಾಂಕ |
|---|---|---|---|---|
| 1 | ಡಾ॥ ಸ್ಮಿತಾ ಜೆ.ಡಿ. ಸಾ.ಆಸ್ಪತ್ರೆ, ಕೆ.ಆರ್.ನಗರ, ಮೈಸೂರು ಜಿಲ್ಲೆ | ಆಕುಕ 67 ಹೆಚ್‌ಎಸ್‌ಡಿ 2015, (ಭಾಗ) ದಿನಾಂಕ: 15/06/2015 | MDS (Oral Medicine & Radiology) ಫಾರೂಕಿಯ ದಂತ ಕಾಲೇಜು, ಮೈಸೂರು | 01–07–2015 |
| 2 | ಡಾ॥ ದೀಪಾ ರೆಡ್ಡಿ ಎನ್. ಸಾ. ಆಸ್ಪತ್ರೆ, ಗೌರಿಬಿದನೂರು, ಚಿಕ್ಕಬಳ್ಳಾಪುರ ಜಿಲ್ಲೆ | ಆಕುಕ 67 ಹೆಚ್‌ಎಸ್‌ಡಿ 2015, (ಭಾಗ) ದಿನಾಂಕ: 15/06/2015 | MDS (Oral Medicine & Radiology) ಕೃಷ್ಣದೇವರಾಯ ದಂತ ವಿಜ್ಞಾನ ಕಾಲೇಜು, ಬೆಂಗಳೂರು | 23–06–2015 |
| 3 | ಡಾ॥ ಅರ್ಚನಾ ಎಂ. ಸಾ.ಆಸ್ಪತ್ರೆ, ಕೇಂದ್ರ, ನಿಟ್ಟೂರು (ಬಿ), ಭಾಲ್ಕಿ ತಾಲ್ಲೂಕು, ಬೀದರ್ ಜಿಲ್ಲೆ. | ಆಕುಕ 67 ಹೆಚ್‌ಎಸ್‌ಡಿ 2015, (ಭಾಗ) ದಿನಾಂಕ: 15/06/2015 | MDS (Oral Medicine & Radiology) ಪಿ.ಎಂ.ನಾಡಗೌಡ ಮೆಮೋರಿಯಲ್ ದಂತ ಕಾಲೇಜು ಮತ್ತು ಆಸ್ಪತ್ರೆ, ಬಾಗಲಕೋಟೆ | 02–07–2015 |
| 4 | ಡಾ॥ ನವೀನ್ ಕುಮಾರ್ ಎಂ.ಎಸ್. ಸ.ಆ.ಕೇಂದ್ರ ಬೆಳ್ಳೂರು, ಮಂಡ್ಯ ಜಿಲ್ಲೆ. | ಆಕುಕ 67 ಹೆಚ್‌ಎಸ್‌ಡಿ 2015, (ಭಾಗ) ದಿನಾಂಕ: 15/06/2015 | MDS (Oral Medicine & Radiology) ಕೆ.ಎಲ್.ಇ.ಎಸ್.ದಂತ ವಿಜ್ಞಾನಗಳ ಸಂಸ್ಥೆ. ಬೆಂಗಳೂರು | 26–06–2015 |
| 5 | ಡಾ॥ ಜ್ಯೋತಿ ಹೆಚ್.ಎಂ. ಸಾರ್ವಜನಿಕ ಆಸ್ಪತ್ರೆ, ಮಧುಗಿರಿ, ತುಮಕೂರು | ಆಕುಕ 67 ಹೆಚ್‌ಎಸ್‌ಡಿ 2015, (ಭಾಗ) ದಿನಾಂಕ: 15/06/2015 | MDS (Oral Medicine & Radiology) ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ದಂತ ಕಾಲೇಜು, ಧಾರವಾಡ. | 01–07–2015 |
| 6 | ಡಾ॥ ಆರತಿ ವಿ.ಕುಲಕರ್ಣಿ ಸ.ಆ.ಕೇಂದ್ರ, ನಿಟ್ಟೆ, ಕಾರ್ಕಳ ತಾ. ಉಡುಪಿ | ಆಕುಕ 67 ಹೆಚ್‌ಎಸ್‌ಡಿ 2015, (ಭಾಗ) ದಿನಾಂಕ: 15/06/2015 | MDS (Oral Medicine & Radiology) ಎ.ಜೆ.ದಂತ ವಿಜ್ಞಾನಗಳ ಸಂಸ್ಥೆ, ಮಂಗಳೂರು | 01–07–2015 |
| 7 | ಡಾ॥ ಸಿದ್ಧರಾಮೇಶ್ವರ ಟಿ.ಎಸ್. ಸ.ಆ.ಹರಪನಹಳ್ಳಿ, ದಾವಣಗೆರೆ ಜಿಲ್ಲೆ | ಆಕುಕ 67 ಹೆಚ್‌ಎಸ್‌ಡಿ 2015, (ಭಾಗ) ದಿನಾಂಕ: 15/06/2015 | MDS (Public Health Dntistry) ಕಾಲೇಜ್ ಆಫ್ ಡೆಂಟಲ್ ಸೈನ್ಸ್, ದಾವಣಗೆರೆ | 01–07–2015 |
| 8 | ಡಾ॥ ದಾಕ್ಷಾಯಿಣಿ ಟಿ.ಡಿ. ಜಿಲ್ಲಾಸ್ಪತ್ರೆ, ವಿಜಯಪುರ | ಆಕುಕ 67 ಹೆಚ್‌ಎಸ್‌ಡಿ 2015, (ಭಾಗ) ದಿನಾಂಕ: 15/06/2015 | MDS (Oral Pathology & micro-biology) ಪಿ.ಎಂ.ನಾಡಗೌಡ ಮೆಮೋರಿಯಲ್ ದಂತ ಕಾಲೇಜು ಮತ್ತು ಆಸ್ಪತ್ರೆ, ಬಾಗಲಕೋಟೆ | 01–07–2015 |

**ಬಿ.ಎಸ್.ನಾಗರಾಜ್**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು)

PR. 569

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** 2015–16 ನೇ ಸಾಲಿನಿಂದ ಸೇವಾನಿರತ ಸ್ನಾತಕೋತ್ತರ ವ್ಯಾಸಂಗ ಮಾಡುತ್ತಿರುವ ವೈದ್ಯರುಗಳಿಗೆ ಪ್ರತಿನಿಯೋಜನಾ ಸೌಲಭ್ಯವನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಆಕುಕ 256 ಹೆಚ್‌ಎಸ್‌ಹೆಚ್ 2015 ದಿನಾಂಕ:20.06.2015

2) ಸರ್ಕಾರದ ಆದೇಶ ಸಂಖ್ಯೆ: ಆಕುಕ 269 ಹೆಚ್‌ಎಸ್‌ಹೆಚ್ 2015 ದಿನಾಂಕ:24.06.2015

3) ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ಅವರ ಪತ್ರ ಸಂಖ್ಯೆ: ಬಿಇಸಿ/ಐಪಿಜಿ/108, 2015–16 ದಿನಾಂಕ: 29–09–2015

**ಪ್ರಸ್ತಾವನೆ:**

**The Karnataka conduct of Entrance Test for selection and admission to Post Graduate Medical and Dental Degree and Diploma Courses Rules 2006** ರ ರೀತ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹಾಗೂ ದಂತ ಆರೋಗ್ಯಾಧಿಕಾರಿಗಳು ಸೇವಾನಿರತ ಕೋಟಾದಡಿ ಉನ್ನತ ವ್ಯಾಸಂಗ ಮಾಡಲು ನಿಯಮಗಳಲ್ಲಿ ಅವಕಾಶ ಕಲ್ಪಿಸಲಾಗಿದೆ. ಆ ಮೇರೆಗೆ ವೈದ್ಯಾಧಿಕಾರಿಗಳು ಪ್ರವೇಶ ಪರೀಕ್ಷೆಯಲ್ಲಿ ಗಳಿಸಿರುವ ಅಂಕ, ಅವರು ಸಲ್ಲಿಸಿರುವ ಗ್ರಾಮೀಣ ಸೇವೆ ಹಾಗೂ ಸೇವಾವಧಿಯ ಮೇಲೆ ಅಂಕಗಳನ್ನು ನೀಡಿ ತಯಾರಿಸಲ್ಪಟ್ಟ ಅರ್ಹತಾ ಪಟ್ಟಿಯ ಆಧಾರದ ಮೇಲೆ ಕೌನ್ಸಿಲಿಂಗ್‌ನಲ್ಲಿ ಭಾಗವಹಿಸಿ ತಜ್ಞತೆ ಮತ್ತು ಕಾಲೇಜುಗಳನ್ನು ಆಯ್ಕೆ ಮಾಡಿಕೊಂಡಿರುತ್ತಾರೆ.

ಆ ಮೇರೆಗೆ 2015–16 ನೇ ಸಾಲಿನಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳನ್ನು ಸೇವಾನಿರತ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಿ ಮೇಲೆ ಕ್ರಮಾಂಕ (1) ಮತ್ತು (2) ರಲ್ಲಿ ಓದಲಾದಂತೆ ಸರ್ಕಾರದ ಆದೇಶಗಳನ್ನು ಹೊರಡಿಸಲಾಗಿತ್ತು.

ಈ ರೀತಿ ವ್ಯಾಸಂಗಕ್ಕೆ ನಿಯೋಜಿಸಲ್ಪಟ್ಟ ವೈದ್ಯಾಧಿಕಾರಿಗಳ ಪೈಕಿ 38 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ವ್ಯಾಸಂಗಕ್ಕೆ ಹಾಜರಾಗಿರುವ ಬಗ್ಗೆ ಸಿ.ಟಿ.ಸಿ, ನಮೂನೆ–19 ಮತ್ತು 19ಎ ರಲ್ಲಿ ಕರಾರು ಬಂಧಪತ್ರ ಹಾಗೂ ಪೆನಾಲ್ಟಿ ಬಾಂಡ್ ಸಲ್ಲಿಸಿರುವುದರಿಂದ ಈ ವೈದ್ಯರುಗಳಿಗೆ ಸೇವಾನಿರತ ಸ್ನಾತಕೋತ್ತರ ವ್ಯಾಸಂಗದ ಅವಧಿಗೆ ಪ್ರತಿನಿಯೋಜನಾ ಸೌಲಭ್ಯವನ್ನು ಮಂಜೂರು ಮಾಡುವಂತೆ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಅವರು ಮೇಲೆ ಕ್ರಮಾಂಕ (3) ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. 5 ವರ್ಷಗಳ ಸರ್ಕಾರಿ ಸೇವೆ ಪೂರೈಸದಿರುವ ವೈದ್ಯಾಧಿಕಾರಿಗಳನ್ನು ಆರ್ಥಿಕ ಇಲಾಖೆಯು ನೀಡಿರುವ ಸಹಮತಿ/ಅಭಿಪ್ರಾಯದಂತೆ ಸೇವಾನಿರತ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಲಾಗಿದೆ. ಪ್ರಸ್ತುತ, ವ್ಯಾಸಂಗ ನಿರತ 38 ವೈದ್ಯಾಧಿಕಾರಿಗಳಿಗೆ ವ್ಯಾಸಂಗದ ಅವಧಿಗೆ ಪ್ರತಿನಿಯೋಜನಾ ಸೌಲಭ್ಯವನ್ನು ಮಂಜೂರು ಮಾಡಲು ಸರ್ಕಾರವು ನಿರ್ಧರಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 395 ಹೆಚ್‌ಎಸ್‌ಹೆಚ್ 2015, ಬೆಂಗಳೂರು, ದಿನಾಂಕ: 17–10–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಈ ಆದೇಶದೊಂದಿಗೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಲಾದ 38 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳನ್ನು 2015–16 ನೇ ಶೈಕ್ಷಣಿಕ ಸಾಲಿನಿಂದ ಪ್ರಥಮ ಬಾರಿಗೆ ಸೇವಾನಿರತ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958 ನಿಯಮ 61 ರ ಅಪೆಂಡಿಕ್ಸ್ II–ಎ I ರನ್ವಯ ಅವರುಗಳಿಗೆ ವ್ಯಾಸಂಗದ ಅವಧಿಗೆ ಪ್ರತಿನಿಯೋಜನಾ ಸೌಲಭ್ಯವನ್ನು ಮಂಜೂರು ಮಾಡಿದೆ.

ಸೇವಾನಿರತ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾದ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ವ್ಯಾಸಂಗಕ್ಕೆ ಹಾಜರಾದ ದಿನಾಂಕದಿಂದ ಪ್ರತಿನಿಯೋಜನಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ ಹಾಗೂ ಅವರುಗಳ ವ್ಯಾಸಂಗದ ಅವಧಿಗೆ ವೇತನ ಮತ್ತು ಇತರೆ ಭತ್ಯೆಗಳನ್ನು ಬಟವಾಡೆ ಮಾಡುವ ಅಧಿಕಾರವನ್ನು ಈ ಕೆಳಕಂಡಂತೆ ನೀಡಿ ಆದೇಶಿಸಿದೆ.

(1) ಸ್ವಾಯತ್ತ ಸಂಸ್ಥೆ/ಖಾಸಗಿ ವೈದ್ಯಕೀಯ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿರುವ ಸೇವಾನಿರತ ವೈದ್ಯರುಗಳಿಗೆ ಸಂಬಂಧಿಸಿದ ಜಿಲ್ಲೆಯ ಜಿಲ್ಲಾ ಶಸ್ತ್ರ ಚಿಕಿತ್ಸಕರು ; ಒಂದು ವೇಳೆ ಜಿಲ್ಲಾ ಶಸ್ತ್ರ ಚಿಕಿತ್ಸಕರ ಹುದ್ದೆಯು ಯಾವುದೇ ಕಾರಣದಿಂದ ಖಾಲಿಯಿದ್ದಲ್ಲಿ, ಸರ್ಕಾರಿ ಆದೇಶ ಸಂಖ್ಯೆ: ಆಕುಕ 34 ಹೆಚ್‌ಎಸ್‌ಹೆಚ್ 2012 ದಿನಾಂಕ: 18/01/2012 ರನ್ವಯ ಪ್ರತಿನಿಯೋಜನಾ ಸೌಲಭ್ಯವನ್ನು ವಿತರಿಸುವ ಅಧಿಕಾರವನ್ನು ಆಯಾ ಜಿಲ್ಲೆಯ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಯವರಿಗೆ ನೀಡಲಾಗಿದೆ.

(2) ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ಇಲ್ಲಿ ವ್ಯಾಸಂಗ ಮಾಡುತ್ತಿರುವ ಸೇವಾನಿರತ ವೈದ್ಯರುಗಳಿಗೆ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು;

ಈ ಆದೇಶವನ್ನು ಆರ್ಥಿಕ ಇಲಾಖೆಯು ಆದೇಶ ಸಂಖ್ಯೆ: ಆಇ 2 ಎಸ್ ಆರ್ ಎ 2008 ದಿನಾಂಕ: 05/06/2008 ರಲ್ಲಿ ಸರ್ಕಾರದ ಇಲಾಖಾ ಕಾರ್ಯದರ್ಶಿಗಳಿಗೆ ನೀಡಲಾಗಿರುವ ಪ್ರತ್ಯಾಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ಎಸ್.ನಾಗರಾಜ್**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು)

ಸರ್ಕಾರದ ಆದೇಶ ಸಂಖ್ಯೆ: ಆಕುಕ 395 ಹೆಚ್ಎಸ್ಹೆಚ್ 2015 ಬೆಂಗಳೂರು, ದಿನಾಂಕ: 17–10–2015 ಕ್ಕೆ ಅನುಬಂಧ

| ಕ್ರಸಂ | ಸರ್ಕಾರಿ ಆದೇಶದ ಪಟ್ಟಿಯ ಕ್ರಮ ಸಂ | ವೈದ್ಯರ ಹೆಸರು ಮತ್ತು ವ್ಯಾಸಂಗದ ಪೂರ್ವದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸ್ಥಳ | ವ್ಯಾಸಂಗ ಮಾಡುತ್ತಿರುವ ವೈದ್ಯಕೀಯ ಮಹಾವಿದ್ಯಾಲಯದ ಹೆಸರು | ತಜ್ಞತೆ | ಸ್ನಾತಕೋತ್ತರ ವ್ಯಾಸಂಗಕ್ಕೆ ಹಾಜರಾದ ದಿನಾಂಕ |
|---|---|---|---|---|---|
| 1 | 28 | DR. H N VEENA<br>PRIMARY HEALTH CENTRE, TOKASANDRA,<br>RAMANAGAR DIST. | BENGALURU MEDICAL COLLEGE, BENGALURU | M.D. SKIN AND VD | 01.07.2015 |
| 2 | 45 | DR. ANNAPOORNA MUNDINAMANI<br>PRIMARY HEALTH CENTRE, KABBUR, HAVERI DIST. | BENGALURU MEDICAL COLLEGE, BENGALURU | M.D. GENERAL MEDICINE | 09.07.2015 |
| 3 | 47 | DR. ANANDA M<br>PRIMARY HEALTH CENTRE, MALDARE, MADIKERI DIST. | BANGALORE MEDICAL COLLEGE, BENGALURU | M.D. RADIOLOGY | 01.07.2015 |
| 4 | 86 | SUMA K.S<br>General Hospital Channapatna, Ramanagar Dist | Bengaluru Medical College, Bengaluru | M.S. Obstetrics and Gynecology | 01.07.2015 |
| 5 | 106 | SONIA J V<br>Primary Health Centre, Banavadi, Ramanagar Dist. | Bengaluru Medical College, Bengaluru | Diploma in Obstetrics and Gynecology | 01.07.2015 |
| 6 | 142 | DR. VINAY KUMAR K N<br>PRIMARY HEALTH CENTER, DEVALAPUR, MANDYA DIST. | MYSURU MEDICAL COLLEGE, MYSURU | M.D. PAEDIATRICS | 24.06.2015 |
| 7 | 145 | DR. CHANNA KRISHNAPPA.K<br>PRIMARY HEALTH CENTRE, UTTANUR, KOLAR DIST. | MYSURU MEDICAL COLLEGE, MYSURU | M.D. GENERAL MEDICINE | 06.07.2015 |
| 8 | 156 | DR. MALLESH.L.<br>PRIMARY HEALTH CENTRE, SHIVALLY, MANDYA DIST. | MYSURU MEDICAL COLLEGE, MYSURU | M.D. ANAESTHESIA | 25.06.2015 |
| 9 | 168 | DR. HARIPRASAD R<br>PRIMARY HEALTH CENTRE, MAYASANDRA, TUMAKURU DIST. | MYSURU MEDICAL COLLEGE, MYSURU | M.S. OBSTETRICS AND GYNECOLOGY | 02.07.2015 |
| 10 | 171 | DR. SRINATH.S PRIMARY HEALTH CENTRE, HOLLARU, KOLRA DIST | MYSURU MEDICAL COLLEGE, MYSURU | DIPLOMA IN CHILD HEALTH | 01.07.2015 |
| 11 | 176 | DR. PALLAVI Y R<br>PRIMARY HEALTH CENTRE, NIDASALE, TUMAKURU DIST. | MYSURU MEDICAL COLLEGE, MYSURU | DIPLOMA IN OBSTETRICS AND GYNECOLOGY | 01.07.2015 |
| 12 | 179 | DR. HARIPRASAD J<br>PRIMARY HEALTH CENTRE, KODASOGE, GUNDLUPET TQ,<br>CHAMARAJANAGARA DIST. | MYSURU MEDICAL COLLEGE, MYSURU | DIPLOMA IN ANESTHESIA | 01.07.2015 |

| ಕ್ರಸಂ | ಸರ್ಕಾರಿ ಆದೇಶದ ಪಟ್ಟಿಯ ಕ್ರಮ ಸಂ | ವೈದ್ಯರ ಹೆಸರು ಮತ್ತು ವ್ಯಾಸಂಗದ ಪೂರ್ವದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸ್ಥಳ | ವ್ಯಾಸಂಗ ಮಾಡುತ್ತಿರುವ ವೈದ್ಯಕೀಯ ಮಹಾವಿದ್ಯಾಲಯದ ಹೆಸರು | ತಜ್ಞತೆ | ಸ್ನಾತಕೋತ್ತರ ವ್ಯಾಸಂಗಕ್ಕೆ ಹಾಜರಾದ ದಿನಾಂಕ |
|---|---|---|---|---|---|
| 13 | 180 | DR. VANI.V<br>PRIMARY HEALTH CENTRE, AKKIHEBBALU, MANDYA DIST. | MYSURU MEDICAL COLLEGE, MYSURU | DIPLOMA IN ANESTHESIA | 26.06.2015 |
| 14 | 209 | DR. SUJATA T PATIL<br>PRIMARY HEALTH CENTRE, SUNAKALLABIDARI, HAVERI DIST. | KARNATAKA INSTITUTE OF MEDICAL SCIENCES,HUBBALI | M.D. SKIN AND VD | 01.07.2015 |
| 15 | 220 | DR. JYOTIKALA PATTAR<br>PRIMARY HEALTH CENTRE, NOGINIHAL, BELAGAVI DIST. | KARNATAKA INSTITUTE OF MEDICAL SCIENCES, HUBBALI | M.S. OPTHALAMOLOGY | 01.07.2015 |
| 16 | 239 | MANU K R<br>GENERAL HOSPITAL, MULABAGILU, KOLAR DIST | KARNATAKA INSTITUTE OF MEDICAL SCIENCES, HUBBALI | M.S. OBSTETRICS AND GYNECOLOGY | 26.06.2015 |
| 17 | 299 | DR. ANAND K<br>PRIMARY HEALTH CENTRE, AMRUTHAHALLI, BANGALURU (U) DIST. | VIJAYANAGAR INSTITUTE OF MEDICAL SCIENCES, BALLARI | DIPLOMA IN MEDICAL RADIOLOGY | 20.07.2015 |
| 18 | 367 | DR. MANJUNATHA.S<br>PRIMARY HEALTH CENTRE, ALAKAPURA, CHIKKABALLAPUR DIST. | JAYA JAGADGURU MURUGHARAJENDRA MEDICAL COLLEGE, DAVANGERE | M.D. PAEDIATRICS | 25.06.2015 |
| 19 | 372 | DR. CHETHAN.G.D<br>MTHU, KUSHALNAGAR, MADIKERI DIST | JAYA JAGADGURU MURUGHARAJENDRA MEDICAL COLLEGE, DAVANGERE | M.D. GENERAL MEDICINE | 01.07.2015 |
| 20 | 379 | DR. SREERAMAIAHPRIMARY HEALTH CENTRE, MARUVEKERE, TUMKUR DIST. | JAYA JAGADGURU MURUGHARAJENDRA MEDICAL COLLEGE, DAVANGERE | M.D EMERGENCY MEDICINE | 07.07.2015 |
| 21 | 380 | DR. VASANTHA KUMAR S H<br>PRIMARY HEALTH CENTRE, TANGALI, CHIKKAMAGALUR DIST. | JAYA JAGADGURU MURUGHARAJENDRA MEDICAL COLLEGE, DAVANGERE | M.S. OPTHALAMOLOGY | 02.07.2015 |
| 22 | 395 | DR. SUDARSHAN S D<br>PRIMARY HEALTH CENTRE, ARALAGUPPE, TUMAKURU DIST. | JAYA JAGADGURU MURUGHARAJENDRA MEDICAL COLLEGE, DAVANGERE | M.S. GENERAL SURGERY | 01.07.2015 |

| ಕ್ರಸಂ | ಸರ್ಕಾರಿ ಆದೇಶದ ಪಟ್ಟಿಯ ಕ್ರಮ ಸಂ | ವೈದ್ಯರ ಹೆಸರು ಮತ್ತು ವ್ಯಾಸಂಗದ ಪೂರ್ವದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸ್ಥಳ | ವ್ಯಾಸಂಗ ಮಾಡುತ್ತಿರುವ ವೈದ್ಯಕೀಯ ಮಹಾವಿದ್ಯಾಲಯದ ಹೆಸರು | ತಜ್ಞತೆ | ಸ್ನಾತಕೋತ್ತರ ವ್ಯಾಸಂಗಕ್ಕೆ ಹಾಜರಾದ ದಿನಾಂಕ |
|---|---|---|---|---|---|
| 23 | 396 | DR. YALAGOUDA MALAGOUDA PATIL<br>PRIMARY HEALTH CENTRE, TAVAG, BELGAVI DIST. | JAYA JAGADGURU MURUGHARAJENDRA MEDICAL COLLEGE, DAVANGERE | M.S. OBSTETRICS AND GYNECOLOGY | 01.07.2015 |
| 24 | 406 | DR. SHIVANANDA HOLEYAPPA G<br>PRIMARY HEALTH CENTRE, BEDKIHAL, BELAGAVI DIST. | JAYA JAGADGURU MURUGHARAJENDRA MEDICAL COLLEGE, DAVANGERE | DIPLOMA IN MEDICAL RADIOLOGY | 01.07.2015 |
| 25 | 409 | DR. HARISH G R<br>PRIMARY HEALTH CENTRE, HESARGHATTA,<br>BENGALURU DIST. | JAYA JAGADGURU MURUGHARAJENDRA MEDICAL COLLEGE, DAVANGERE | DIPLOMA IN OBSTETRICS AND GYNECOLOGY | 01.07.2015 |
| 26 | 426 | DR. RAVEENDRAKUMAR JAKANUR<br>PRIMARY HEALTH CENTRE, HOSURU, BELGAVI DIST. | M.S.RAMAIAH MEDICAL COLLEGE, BENGALURU | M.D. GENERAL MEDICINE | 01.07.2015 |
| 27 | 430 | DR. YASHAWANTH T L<br>DISTRICT HOSPITAL, TUMAKURU | M.S.RAMAIAH MEDICAL COLLEGE, BENGALURU | M.D. PULMONARY MEDICINE | 01.07.2015 |
| 28 | 436 | RADHA M<br>PRIMARY HEALTH CENTRE, GIRINAGARA, HASSAN DIST. | M.S.RAMAIAH MEDICAL COLLEGE, BENGALURU | M.D. ANAESTHESIA | 01.07.2015 |
| 29 | 439 | DR. ARUN.V.HALAGATTI<br>PRIMARY HEALTH CENTRE, BELGUNDI, BELGAVI DIST. | M.S.RAMAIAH MEDICAL COLLEGE, BENGALURU | M.S. GENERAL SURGERY | 27.07.2015 |
| 30 | 467 | DR. POOVAIAH.C.K<br>COMMUNITY HEALTH CENTRE, KUTTA,<br>MADIKERI DIST. | KEMPEGOWDA INSTITUTE OF MEDICAL SCIENCES, BENGALURU | M.S. ORTHOPEDICS | 02.07.2015 |
| 31 | 541 | DR. MAREYALLAPPANAVAR GURUSIDDAPPAPRIMARY<br>HEALTH CENTRE, CHACHADI, BELAGAVI DIST. | SHYMANURU SHIVASHANKARAPPA INSTITUTE OF MEDICAL SCIENCES, DAVANGERE | M.D. SKIN AND VD | 21.07.2015 |
| 32 | 553 | DR. SANGANABASAPPA<br>PRIMARY HEALTH CENTRE, ALWANDI,<br>KOPPAL DIST. | S. NIJALINGAPPA MEDICAL COLLEGE AND RESEARCH CENTRE, BAGALKOT | M.D. GENERAL MEDICINE | 01.07.2015 |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| ಕ್ರ.ಸಂ | ಸರ್ಕಾರಿ ಆದೇಶದ ಪಟ್ಟಿಯ ಕ್ರಮ ಸಂ | ವೈದ್ಯರ ಹೆಸರು ಮತ್ತು ವ್ಯಾಸಂಗದ ಪೂರ್ವದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸ್ಥಳ | ವ್ಯಾಸಂಗ ಮಾಡುತ್ತಿರುವ ವೈದ್ಯಕೀಯ ಮಹಾವಿದ್ಯಾಲಯದ ಹೆಸರು | ತಜ್ಞತೆ | ಸ್ನಾತಕೋತ್ತರ ವ್ಯಾಸಂಗಕ್ಕೆ ಹಾಜರಾದ ದಿನಾಂಕ |
|---|---|---|---|---|---|
| 33 | 571 | DR. CHANABASAYYA VIRAKTAMATH<br>PRIMARY HEALTH CENTRE, KATENAHALLI,<br>HAVERI DIST. | FATHER MULLER INSTITUTE OF MED. EDUCATION & RESEARCH, MANGALURU | M.D. SKIN AND VD | 02.07.2015 |
| 34 | 573 | DR. LAXMIPATI G H<br>PRIMARY HEALTH CENTRE, TUMMINAKATTI,<br>HAVERI DIST. | FATHER MULLER INSTITUTE OF MED. EDUCATION & RESEARCH, MANGALURU | M.D. PAEDIATRICS | 06.07.2015 |
| 35 | 583 | DR. SAMIULLA SHARIFF<br>PRIMARY HEALTH CENTRE, ALADAGERI,<br>HAVERI DIST. | FATHER MULLER INSTITUTE OF MED. EDUCATION & RESEARCH, MANGALURU | M.S. ORTHOPEDICS | 31.07.2015 |
| 36 | 622 | DR. SANJAY DODDAMANI<br>PRIMARY HEALTH CENTRE, DADDI,<br>BELAGAVI DIST. | SRI DHARMASTHALA MANJUNATHESHWARA MEDICAL COLLEGE, DHARWAD | DIPLOMA IN OBSTETRICS AND GYNECOLOGY | 01.07.2015 |
| 37 | 664 | DR. RENUKESHWARA D V<br>PRIMARY HEALTH CENTRE, HOSAKERE,<br>TUMAKURU DIST. | A.J.INSTITUTE OF MEDICAL SCIENCES, MANGALURU | M.D. GENERAL MEDICINE | 07.07.2015 |
| 38 | 724 | DR. HAMSALEKHA NAIK L<br>COMMUNITY HEALTH CENTRE, B. DURGA,<br>CHITRADURGA DIST. | ESI MEDICAL COLLEGE, BENGALURU | M.S. OBSTETRICS AND GYNECOLOGY | 26.06.2015 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಎಸ್.ನಾಗರಾಜ್**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು)

**PR. 657**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59

## ಆರ್ಥಿಕ ಸಚಿವಾಲಯ

**ವಿಷಯ:** ತುಟ್ಟಿಭತ್ಯೆಯ ದರಗಳ ಪರಿಷ್ಕರಣೆ.

**ಓದಲಾಗಿದೆ:**
1. ಸ.ಆ.ಸಂಖ್ಯೆ: ಎಫ್‌ಡಿ 23 ಎಸ್‌ಆರ್‌ಪಿ 2011, ದಿನಾಂಕ: 15.06.2011
2. ಸ.ಆ.ಸಂಖ್ಯೆ: ಎಫ್‌ಡಿ 07 ಎಸ್‌ಆರ್‌ಪಿ 2012, ದಿನಾಂಕ: 21.04.2012
3. ಸ.ಆ.ಸಂಖ್ಯೆ: ಎಫ್‌ಡಿ 17 ಎಸ್‌ಆರ್‌ಪಿ 2012, ದಿನಾಂಕ: 14.05.2012
4. ಸ.ಆ.ಸಂಖ್ಯೆ: ಎಫ್‌ಡಿ 25 ಎಸ್‌ಆರ್‌ಪಿ 2012, ದಿನಾಂಕ: 17.10.2012
5. ಸ.ಆ.ಸಂಖ್ಯೆ: ಎಫ್‌ಡಿ 09 ಎಸ್‌ಆರ್‌ಪಿ 2013, ದಿನಾಂಕ: 08.05.2013
6. ಸ.ಆ.ಸಂಖ್ಯೆ: ಎಫ್‌ಡಿ 21 ಎಸ್‌ಆರ್‌ಪಿ 2013, ದಿನಾಂಕ: 03.10.2013
7. ಸ.ಆ.ಸಂಖ್ಯೆ: ಎಫ್‌ಡಿ 5 ಎಸ್‌ಆರ್‌ಪಿ 2014, ದಿನಾಂಕ: 08.04.2014
8. ಸ.ಆ.ಸಂಖ್ಯೆ: ಎಫ್‌ಡಿ 17 ಎಸ್‌ಆರ್‌ಪಿ 2014, ದಿನಾಂಕ: 26.09.2014
9. ಸ.ಆ.ಸಂಖ್ಯೆ: ಎಫ್‌ಡಿ 11 ಎಸ್‌ಆರ್‌ಪಿ 2015, ದಿನಾಂಕ: 24.04.2015
10. ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ ಇವರ ಪತ್ರ ದಿನಾಂಕ: 24.09.2015.

**ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 18 ಎಸ್‌ಆರ್‌ಪಿ 2015, ಬೆಂಗಳೂರು, ದಿನಾಂಕ: 30ನೇ ಸೆಪ್ಟೆಂಬರ್, 2015.**

ರಾಜ್ಯ ಸರ್ಕಾರಿ ನೌಕರರುಗಳಿಗೆ 2012ರ ಪರಿಷ್ಕೃತ ವೇತನ ಶ್ರೇಣಿಗಳಲ್ಲಿ 1ನೇ ಜುಲೈ 2015 ರಿಂದ ಜಾರಿಗೆ ಬರುವಂತೆ ತುಟ್ಟಿ ಭತ್ಯೆಯ ದರವನ್ನು ಮೂಲ ವೇತನದ ಶೇಕಡ 28.75 ರಿಂದ ಶೇಕಡ 32.5 ಕ್ಕೆ ಹೆಚ್ಚಿಸಿ ಮಂಜೂರು ಮಾಡಲು ಸರ್ಕಾರವು ಹರ್ಷಿಸುತ್ತದೆ.

2. ಸರ್ಕಾರದ ಮತ್ತು ಜಿಲ್ಲಾ ಪಂಚಾಯತ್‌ಗಳ ಪೂರ್ಣಾವಧಿ ನೌಕರರಿಗೆ, ಕಾಲಿಕ ವೇತನ ಶ್ರೇಣಿಗಳಲ್ಲಿರುವ ಪೂರ್ಣಾವಧಿ ವರ್ಕ್‌ಚಾರ್ಜ್ ನೌಕರರಿಗೆ ಹಾಗೂ ಸರ್ಕಾರದಿಂದ ಸಹಾಯಾನುದಾನ ಪಡೆಯುತ್ತಿರುವ ಶಿಕ್ಷಣ ಸಂಸ್ಥೆಗಳಲ್ಲಿ ಮತ್ತು ವಿಶ್ವವಿದ್ಯಾಲಯಗಳಲ್ಲಿ ಕಾಲಿಕ ವೇತನ ಶ್ರೇಣಿಗಳಲ್ಲಿರುವ ಪೂರ್ಣಾವಧಿ ನೌಕರರುಗಳಿಗೆ ಈ ಆದೇಶ ಅನ್ವಯಿಸುತ್ತದೆ.

3. ತುಟ್ಟಿಭತ್ಯೆಯ ಉದ್ದೇಶಕ್ಕಾಗಿ "ಮೂಲ ವೇತನ" ಎಂದರೆ ಸರ್ಕಾರಿ ನೌಕರನು ಧಾರಣ ಮಾಡಿರುವ ಹುದ್ದೆಗೆ ಅನ್ವಯವಾಗುವ ವೇತನ ಶ್ರೇಣಿಯಲ್ಲಿ ಪಡೆಯುತ್ತಿರುವ ವೇತನ ಮತ್ತು ಅದರಲ್ಲಿ,

(ಅ) ವೇತನ ಶ್ರೇಣಿಯ ಗರಿಷ್ಠಕ್ಕಿಂತ ಹೆಚ್ಚಾಗಿ ಅವನಿಗೆ ಸ್ಥಗಿತ ವೇತನ ಬಡ್ತಿಯನ್ನು ನೀಡಲಾಗಿದ್ದರೆ, ಆ ಸ್ಥಗಿತ ವೇತನ ಬಡ್ತಿ,

(ಆ) 2012ರ ಕರ್ನಾಟಕ ನಾಗರಿಕ ಸೇವಾ (ಪರಿಷ್ಕೃತ ವೇತನ) ನಿಯಮಗಳ 7ನೇ ನಿಯಮದ (3)ನೇ ಉಪನಿಯಮದ ಮೇರೆಗೆ ಅವನಿಗೆ ನೀಡಲಾದ ವೈಯಕ್ತಿಕ ವೇತನ ಯಾವುದಾದರೂ ಇದ್ದರೆ, ಆ ವೈಯಕ್ತಿಕ ವೇತನ,

(ಇ) ವೇತನ ಶ್ರೇಣಿಯ ಗರಿಷ್ಠಕ್ಕಿಂತ ಹೆಚ್ಚಾಗಿ ಅವನಿಗೆ ಮಂಜೂರು ಮಾಡಲಾಗಿರುವ ಹೆಚ್ಚುವರಿ ವೇತನ ಬಡ್ತಿ ಯಾವುದಾದರೂ ಇದ್ದಲ್ಲಿ, ಅವುಗಳು ಸೇರುತ್ತವೆ.

4 ಮೂಲ ವೇತನಕ್ಕೆ ಮೇಲೆ ಸೂಚಿಸಿರುವುದನ್ನು ಹೊರತುಪಡಿಸಿ ಇತರೆ ಯಾವುದೇ ಉಪಲಬ್ಧಗಳನ್ನು ಸೇರಿಸತಕ್ಕದ್ದಲ್ಲ.

5. ರಾಜ್ಯ ಸರ್ಕಾರದ ನಿವೃತ್ತಿ ವೇತನದಾರರು/ಕುಟುಂಬ ನಿವೃತ್ತಿ ವೇತನದಾರರಿಗೆ ಮತ್ತು ರಾಜ್ಯದ ಸಂಚಿತ ನಿಧಿಯಿಂದ ನಿವೃತ್ತಿ ವೇತನ ಮತ್ತು ಕುಟುಂಬ ನಿವೃತ್ತಿ ವೇತನವನ್ನು ಪಡೆಯುತ್ತಿರುವಂತಹ ಅನುದಾನಿತ ಶಿಕ್ಷಣ ಸಂಸ್ಥೆಗಳ ನಿವೃತ್ತಿ ವೇತನದಾರರು/ಕುಟುಂಬ ನಿವೃತ್ತಿ ವೇತನದಾರರಿಗೆ ಹಾಲಿ ಲಭ್ಯವಿರುವ ತುಟ್ಟಿಭತ್ಯೆಯ ದರವನ್ನು ಮೂಲ ನಿವೃತ್ತಿ ವೇತನ/ಕುಟುಂಬ ನಿವೃತ್ತಿ ವೇತನದ ಶೇಕಡ 28.75 ರಿಂದ ಶೇಕಡ 32.5 ಕ್ಕೆ ಹೆಚ್ಚಿಸಿ ದಿನಾಂಕ: 1ನೇ ಜುಲೈ, 2015 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಸಹ ಸರ್ಕಾರವು ಹರ್ಷಿಸುತ್ತದೆ.

6. ಯುಜಿಸಿ/ಎಐಸಿಟಿಇ/ಐಸಿಎಆರ್ ವೇತನ ಶ್ರೇಣಿಗಳಲ್ಲಿ ವೇತನ ಪಡೆಯುತ್ತಿದ್ದ ಪಿಂಚಣಿದಾರರು/ಕುಟುಂಬ ಪಿಂಚಣಿದಾರರಿಗೆ ಹಾಲಿ ಲಭ್ಯವಿರುವ ತುಟ್ಟಿಭತ್ಯೆಯ ದರವನ್ನು ಮೂಲ ನಿವೃತ್ತಿ ವೇತನ/ಕುಟುಂಬ ನಿವೃತ್ತಿ ವೇತನದ ಶೇಕಡ 28.75 ರಿಂದ ಶೇಕಡ 32.5 ಕ್ಕೆ ಹೆಚ್ಚಿಸಿ ದಿನಾಂಕ: 1ನೇ ಜುಲೈ, 2015 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಸಹ ಸರ್ಕಾರವು ಹರ್ಷಿಸುತ್ತದೆ.

7. ಯುಜಿಸಿ/ಎಐಸಿಟಿಇ/ಐಸಿಎಆರ್/ಎನ್‌ಜೆಪಿಸಿ ವೇತನ ಶ್ರೇಣಿಗಳಲ್ಲಿ ವೇತನ ಪಡೆಯುತ್ತಿರುವ ನೌಕರರಿಗೆ ಮತ್ತು ಎನ್‌ಜೆಪಿಸಿ ಪಂಚಣಿದಾರರಿಗೆ ಸಂಬಂಧಿಸಿದಂತೆ ಪ್ರತ್ಯೇಕ ಆದೇಶಗಳನ್ನು ಹೊರಿಸಲಾಗುವುದು.

8. ಈ ಆದೇಶದ ಮೇರೆಗೆ ಲಭ್ಯವಿರುವ ತುಟ್ಟಿಭತ್ಯೆಯನ್ನು ನಗದಾಗಿ ಪಾವತಿ ಮಾಡಲಾಗುವುದು.

9. ತುಟ್ಟಿಭತ್ಯೆಯ ಕಾರಣದಿಂದ ಸಂದಾಯ ಮಾಡಬೇಕಾಗಿರುವ ಐವತ್ತು ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಕಗಳನ್ನು ಮುಂದಿನ ರೂಪಾಯಿಗೆ ಪೂರ್ಣಗೊಳಿಸತಕ್ಕದ್ದು ಮತ್ತು ಐವತ್ತು ಪೈಸೆಗಿಂತ ಕಡಿಮೆ ಇರುವ ಭಿನ್ನಾಂಕಗಳನ್ನು ಕಡೆಗಣಿಸತಕ್ಕದ್ದು.

10. ತುಟ್ಟಿಭತ್ಯೆಯನ್ನು ಸಂಭಾವನೆಯ ವಿಶಿಷ್ಟ ಅಂಶವಾಗಿ ತೋರಿಸುವುದು ಮತ್ತು ಯಾವುದೇ ಉದ್ದೇಶಕ್ಕಾಗಿ ಇದನ್ನು ವೇತನ ಎಂದು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್.ರಾಜಲಕ್ಷ್ಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸೇವೆಗಳು–2)

## FINANCE SECRETARIAT

**Sub:** Revision of the rates of Dearness Allowance -reg.

**Read:**
1. G.O.No.FD 23 SRP 2011, Dated: 15.06.2011.
2. G.O.No.FD 07 SRP 2012, Dated: 21.04.2012.
3. G.O.No.FD 17 SRP 2012, Dated: 14.05.2012.
4. G.O.No.FD 25 SRP 2012, Dated: 17.10.2012.
5. G.O.No.FD 09 SRP 2013, Dated: 08.05.2013.
6. G.O.No.FD 21 SRP 2013, Dated: 03.10.2013.
7. G.O.No.FD 5 SRP 2014, Dated: 08.04.2014.
8. G.O.No.FD 17 SRP 2014, Dated: 26.09.2014.
9. G.O.No.FD 11 SRP 2015, Dated: 24.04.2015.
10. Representation dated: 24.09.2015 of the President, Karnataka State Government Employees' Association.

**GOVERNMENT ORDER NO. FD 18 SRP 2015, BENGALURU, DATED: 30TH SEPTEMBER, 2015.**

Government are pleased to sanction increase in the rates of Dearness allowance payable to the State Government Employees in the Revised pay Scales 2012 from the existing 28.75% to 32.5% of Basic pay with effect from 1st July, 2015.

2. These orders will apply to the full time Government Employees, Employees of Zilla Panchayat, Work Charged Employees on regular time scales of pay, full time Employees of Aided Educational Institutions and Universities who are on regular time scales of pay.

3. For the purpose of grant of Dearness Allowance, the term `Basic Pay' means pay drawn by a Government Employee in the scale of pay applicable to the post held by him and includes:

a. Stagnation increment, if any, granted to him above the maximum of the scale of pay.

b. Personal Pay, if any, granted to him under sub-rule (3) of Rule 7 of the Karnataka Civil Services (Revised Pay)Rules, 2012.

c. Additional increment, if any, granted to him above the maximum of the scale of pay.

4. Basic Pay shall not include any emoluments other than those specified above.

5. Government are also pleased to sanction increase in the rates of Dearness allowance from the existing 28.75% to 32.5% of the Basic Pension/Family Pension with effect from 1st July, 2015 to the State Government Pensioners/Family Pensioners and Pensioners/Family Pensioners of the Aided Educational Institutions whose Pension/Family Pension is paid out of the Consolidated Fund of the State.

6. Government are also pleased to sanction increase in the rates of Dearness Allowance from the existing 28.75% to 32.5% of the Basic Pension/Family Pension with effect from 1st July, 2015 to the Pensioners/Family Pensioners who were drawing pay in the UGC/AICTE/ICAR scales of pay.

7. Separate orders will be issued in respect of Employees on UGC/AICTE/ICAR/NJPC scales of pay and also in respect of NJPC Pensioners.

8. the increase in Dearness Allowance admissible under this order is payable in cash.

9. The payment on account of Dearness Allowance involving fractions of 50 paise and above shall be rounded off to the next rupee and franctions less than 50 paise shall be ignored.

10. The Dearness Allowance will be shown as a distinct element of remuneration and will not be treated as pay for any purpose.

BY ORDER AND IN THE NAME OF THE GOVERNOR OF KARNATAKA,

**K.S.RAJALAKSHMI**

**PR. 612** Under Secretary to Government,

**SC. 500** Finance Department (Services-2).

## ಆರ್ಥಿಕ ಸಚಿವಾಲಯ

**ವಿಷಯ:** ಯುಜಿಸಿ/ಐಸಿಎಆರ್/ಎಐಸಿಟಿಇ ವೇತನ ಶ್ರೇಣಿಗಳಲ್ಲಿ ವೇತನ ಪಡೆಯುತ್ತಿರುವ ಬೋಧಕ ವರ್ಗದವರಿಗೆ ಮತ್ತು ಎನ್‌ಜೆಪಿಸಿ ವೇತನ ಶ್ರೇಣಿಯಲ್ಲಿರುವ ನ್ಯಾಯಾಂಗ ಅಧಿಕಾರಿಗಳಿಗೆ/ನಿವೃತ್ತಿ ವೇತನದಾರರಿಗೆ ತುಟ್ಟಿ ಭತ್ಯೆಯನ್ನು ಮಂಜೂರು ಮಾಡುವ ಕುರಿತು.

**ಓದಲಾಗಿದೆ:**
1. ಸ.ಆ.ಸಂಖ್ಯೆ: ಎಫ್‌ಡಿ 10 ಎಸ್‌ಆರ್‌ಪಿ 2013, ದಿನಾಂಕ: 20.05.2013.
2. ಸ.ಆ.ಸಂಖ್ಯೆ: ಎಫ್‌ಡಿ 12 ಎಸ್‌ಆರ್‌ಪಿ 2013 (II) ದಿನಾಂಕ: 12.06.2013.
3. ಸ.ಆ.ಸಂಖ್ಯೆ: ಎಫ್‌ಡಿ 22 ಎಸ್‌ಆರ್‌ಪಿ 2013, ದಿನಾಂಕ: 10.10.2013.
4. ಸ.ಆ.ಸಂಖ್ಯೆ: ಎಫ್‌ಡಿ 07 ಎಸ್‌ಆರ್‌ಪಿ 2014, ದಿನಾಂಕ: 11.04.2014.
5. ಸ.ಆ.ಸಂಖ್ಯೆ: ಎಫ್‌ಡಿ 18 ಎಸ್‌ಆರ್‌ಪಿ 2014, ದಿನಾಂಕ: 01.10.2014.
6. ಸ.ಆ.ಸಂಖ್ಯೆ: ಎಫ್‌ಡಿ 12 ಎಸ್‌ಆರ್‌ಪಿ 2015, ದಿನಾಂಕ: 08.05.2015

**ಸರ್ಕಾರಿ ಆದೇಶ ಸಂಖ್ಯೆ: ಆಇ 19 ಎಸ್‌ಆರ್‌ಪಿ 2015, ಬೆಂಗಳೂರು, ದಿನಾಂಕ: 8ನೇ ಅಕ್ಟೋಬರ್, 2015.**

ಯುಜಿಸಿ/ಎಐಸಿಟಿಇ/ಐಸಿಎಆರ್ ವೇತನ ಶ್ರೇಣಿಗಳಲ್ಲಿರುವ ಬೋಧಕ ಸಿಬ್ಬಂದಿಗಳಿಗೆ ಮತ್ತು ಎನ್ ಜೆಪಿಸಿ ವೇತನ ಶ್ರೇಣಿಯಲ್ಲಿರುವ ನ್ಯಾಯಾಂಗ ಅಧಿಕಾರಿಗಳಿಗೆ ಹಾಲಿ ಲಭ್ಯವಿರುವ ತುಟ್ಟಿಭತ್ಯೆಯ ದರವನ್ನು ಮೂಲ ವೇತನದ ಶೇ.113 ರಿಂದ ಶೇ.119 ಕ್ಕೆ ಹೆಚ್ಚಿಸಿ ದಿನಾಂಕ: 1ನೇ ಜುಲೈ, 2015 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಸರ್ಕಾರವು ಹರ್ಷಿಸುತ್ತದೆ.

2. ಈ ಆದೇಶದ ಉದ್ದೇಶಗಳಿಗಾಗಿ 'ಮೂಲ ವೇತನ' ಎಂದರೆ ಸರ್ಕಾರಿ ನೌಕರನು ಧಾರಣ ಮಾಡಿರುವ ಹುದ್ದೆಗೆ ಅನ್ವಯವಾಗುವ ಯುಜಿಸಿ/ಐಸಿಎಆರ್/ಎಐಸಿಟಿಇ ಮತ್ತು ಎನ್‌ಜೆಪಿಸಿ ವೇತನ ಶ್ರೇಣಿಗಳಲ್ಲಿ ಪಡೆಯುವ ವೇತನ.

3. ಮೂಲ ವೇತನಕ್ಕೆ ಇನ್ನಾವುದೇ ಉಪಲಬ್ದಗಳನ್ನು ಸೇರಿಸತಕ್ಕದ್ದಲ್ಲ.

4. ಎನ್‌ಜೆಪಿಸಿ ನಿವೃತ್ತಿ ವೇತನದಾರರು/ಕುಟುಂಬ ನಿವೃತ್ತಿ ವೇತನದಾರರಿಗೆ ಹಾಲಿ ಲಭ್ಯವಿರುವ ತುಟ್ಟಿ ಭತ್ಯೆಯ ದರವನ್ನು ಮೂಲ ನಿವೃತ್ತಿ ವೇತನ/ಕುಟುಂಬ ನಿವೃತ್ತಿ ವೇತನದ ಶೇ.113 ರಿಂದ ಶೇ.119 ಕ್ಕೆ ಹೆಚ್ಚಿಸಿ ದಿನಾಂಕ: 1ನೇ ಜುಲೈ, 2015 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಸಹ ಸರ್ಕಾರವು ಹರ್ಷಿಸುತ್ತದೆ.

5. ಈ ಆದೇಶದ ಮೇರೆಗೆ ಮಂಜೂರಾಗಿರುವ ತುಟ್ಟಿ ಭತ್ಯೆಯನ್ನು ಮುಂದಿನ ಆದೇಶ ಹೊರಡಿಸುವವರೆಗೆ ನಗದಾಗಿ ಪಾವತಿ ಮಾಡಲಾಗುವುದು.

6. ತುಟ್ಟಿ ಭತ್ಯೆಯ ಕಾರಣದಿಂದ ಸಂದಾಯ ಮಾಡಬೇಕಾಗಿರುವ ಐವತ್ತು ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಕಗಳನ್ನು ಮುಂದಿನ ರೂಪಾಯಿಗೆ ಪೂರ್ಣಗೊಳಿಸತಕ್ಕದ್ದು ಮತ್ತು ಐವತ್ತು ಪೈಸೆಗಿಂತ ಕಡಿಮೆ ಇರುವ ಭಿನ್ನಾಂಕಗಳನ್ನು ಕಡೆಗಣಿಸತಕ್ಕದ್ದು.

7. ತುಟ್ಟಿ ಭತ್ಯೆಯನ್ನು ಸಂಭಾವನೆಯ ವಿಶಿಷ್ಟ ಅಂಶವಾಗಿ ತೋರಿಸುವುದು ಮತ್ತು ಯಾವುದೇ ಉದ್ದೇಶಕ್ಕಾಗಿ ಇದನ್ನು ವೇತನ ಎಂದು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಿಶ್ವನಾಥ್**

ಸರ್ಕಾರದ ಉಪ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸೇವೆಗಳು–2)

## FINANCE SECRETARIAT

**Sub:** Dearness Allowance to Teaching Staff on UGC/AICTE/ICAR scales of pay and Judicial Officer/Pensioners on NJPC pay scales-Revision of rates.

**Read:**
1. G.O.No.FD 10 SRP 2013, Dated: 20.05.2013.
2. G.O.No.FD 12 SRP 2013(II), Dated: 12.06.2013.
3. G.O.No.FD 22 SRP 2013, Dated: 10.10.2013.
4. G.O.No.FD 07 SRP 2014, Dated: 11.04.2014.
5. G.O.No.FD 18 SRP 2014, Dated: 01.10.2014.
6. G.O.No.FD 12 SRP 2015, Dated: 08.05.2015.

**GOVERNMENT ORDER NO. FD 19 SRP 2015, BENGALURU, DATED: 8th OCTOBER, 2015.**

Government are pleased to sanction increase in the rates of Dearness allowance to Teaching Staff who are on UGC/AICTE/ICAR scales of pay and to Judicial Officers on NJPC pay scales from the exsting 113% to 119% of the basic pay with effect from 1st July, 2015.

2. For the purpose of this order, the term `Basic Pay' means, the pay drawn by a Government employee in the UGC/AICTE/ICAR and NJPC scales of pay applicable to the post held by him.

3. Basic Pay shall not include any other emoluments.

4. Government are also pleased to sanction increase in the rates of Dearness Allowance to NJPC Pensioners/Family Pensioners from the existing 113% to 119% of the basic pension/family pension with effect from 1st July, 2015.

5. The increase in Dearness Allowance admissible under this order is payable in cash until further orders.

6. The payment on account of Dearness Allowance involving fractions of 50 paise and above shall be rounded off to the next rupee and fractions less than 50 paise shall be ignored.

7. The Dearness Allowance will be shown as a distinct element of remuneration and will not be treated as pay for any purpose.

BY ORDER AND IN THE NAME OF THE GOVERNOR OF KARNATAKA,

**M.VISHWANATH**

Deputy Secretary to Government,

Finance Department (Services-2).

**PR. 613**

**SC. 200**

## ಆರ್ಥಿಕ ಸಚಿವಾಲಯ

**ವಿಷಯ:** ಶ್ರೀ ಜೆ.ಎನ್.ಸೋಮೇಶ್ವರ, ನಿವೃತ್ತ, ಅಬಕಾರಿ ಉಪ ಆಯುಕ್ತರು, ಅಬಕಾರಿ ಇಲಾಖೆ, ಇವರ ವಿರುದ್ಧ ಇಲಾಖಾ ವಿಚಾರಣೆ–ಅಂತಿಮ ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 67 ಇಪಿಎಸ್ 2013, ದಿನಾಂಕ: 09/01/2014
2. ಶ್ರೀ ಹೆಚ್.ವಿ.ರಾಮಚಂದ್ರ ರಾವ್, ನಿವೃತ್ತ, ನ್ಯಾಯಾಧೀಶರು ಮತ್ತು ವಿಚಾರಣಾಧಿಕಾರಿಯವರ ವರದಿ ದಿನಾಂಕ: 06/05/2014.

**ಪ್ರಸ್ತಾವನೆ:**

ಶ್ರೀ ಜೆ.ಎನ್.ಸೋಮೇಶ್ವರ, ಅಬಕಾರಿ ಉಪ ಆಯುಕ್ತರು, ಅಬಕಾರಿ ಇಲಾಖೆ ಇವರು ದಿನಾಂಕ: 17.09.2010 ರಿಂದ 18.03.2013ರ ವರೆಗೆ ಮಂಡ್ಯ ಜಿಲ್ಲೆಯ ಅಬಕಾರಿ ಉಪ ಆಯುಕ್ತರ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ದಿನಾಂಕ: 07/03/2013ರಂದು ನಡೆಸಲಾದ ಸ್ಥಳೀಯ ಸಂಸ್ಥೆಗಳ ಸಾರ್ವತ್ರಿಕ ಚುನಾವಣಾ ಅಂಗವಾಗಿ ಹೊರಡಿಸಲಾದ ಚುನಾವಣಾ ಮಾದರಿ ನೀತಿ ಸಂಹಿತೆ ಅನ್ವಯ ಅವರ ಕಾರ್ಯವ್ಯಾಪ್ತಿಯಲ್ಲಿ ಮದ್ಯದ ಅಕ್ರಮ ಸಂಗ್ರಹಣೆ, ಸಾಗಾಣಿಕೆ, ಮಾರಾಟ ಮುಂತಾದ ನೀತಿಬಾಹಿರ ಚಟುವಟಿಕೆಗಳು ನಡೆಯದಂತೆ ಕಟ್ಟೆಚ್ಚರ ವಹಿಸಬೇಕೆಂದು ನೀಡಲಾದ ಸೂಚನೆಗಳನ್ನು ಉಲ್ಲಂಘಿಸಿ ಪ್ರತಿ ಮದ್ಯ ಮಾರಾಟಗಾರರಿಂದ ಮದ್ಯವನ್ನು ಸಂಗ್ರಹಿಸುವ ಮೂಲಕ ಚುನಾವಣಾ ನೀತಿ ಸಂಹಿತೆಯನ್ನು ಉಲ್ಲಂಘಿಸಿ ದುರ್ನಡತೆ ಎಸಗಿದ ಆರೋಪಕ್ಕಾಗಿ ಮೇಲೆ (1)ರಲ್ಲಿ ಓದಲಾದ ದಿನಾಂಕ: 09–01–2014ರ ಸರ್ಕಾರಿ ಆದೇಶದಲ್ಲಿ ಅವರ ವಿರುದ್ದ ಇಲಾಖಾ ವಿಚಾರಣೆಗೆ ಆದೇಶಿಸಿ ಶ್ರೀ ಹೆಚ್.ವಿ.ರಾಮಚಂದ್ರ ರಾವ್, ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣಾಧಿಕಾರಿಯವರು ವಿಚಾರಣೆಯನ್ನು ನಡೆಸಿ ಮೇಲೆ (2)ರಲ್ಲಿ ಓದಲಾದ ದಿನಾಂಕ: 06/05/2014ರ ವಿಚಾರಣಾ ವರದಿ ಸಲ್ಲಿಸಿ ಆರೋಪಿತ ಅಧಿಕಾರಿಯ ಮೇಲೆ ಹೊರಿಸಲಾದ ಆರೋಪಗಳು ಸಾಭೀತಾಗಿರುವುದಿಲ್ಲವೆಂದು ನಿರ್ಣಯಿಸಿದ್ದಾರೆ, ವಿಚಾರಣಾ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು, ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಎಫ್‌ಡಿ 67 ಇಪಿಎಸ್ 2013, ಬೆಂಗಳೂರು, ದಿನಾಂಕ: 05ನೇ ಅಕ್ಟೋಬರ್, 2015.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ವಿಚಾರಣಾ ವರದಿಯಲ್ಲಿನ ನಿರ್ಣಯವನ್ನು ಒಪ್ಪಿ ಜೆ.ಎನ್.ಸೋಮೇಶ್ವರ, ಅಬಕಾರಿ ಉಪ ಆಯುಕ್ತರು, ಇವರ ಮೇಲಿನ ಆರೋಪಗಳಿಂದ ದೋಷಮುಕ್ತಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವೆಂಕಟೇಶ್ ಜಿ.,**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಅಬಕಾರಿ)

**PR. 608**

## ಆರ್ಥಿಕ ಸಚಿವಾಲಯ

**ವಿಷಯ:** ಶ್ರೀ ಎ.ಎಸ್.ಮಂಗಾಣಿ, ಅಂದಿನ ಅಬಕಾರಿ ಉಪ ಆಯುಕ್ತರು ಪ್ರಸ್ತುತ ನಿವೃತ್ತ, ಶ್ರೀ ಲಿಂಗರಾಜು, ಅಬಕಾರಿ ಉಪ ನಿರೀಕ್ಷಕರು ಮತ್ತು ಶ್ರೀ ಕೃಷ್ಣ, ಅಬಕಾರಿ ನಿರೀಕ್ಷಕರು, ಗುಬ್ಬಿ ವಲಯ, ತುಮಕೂರು ಜಿಲ್ಲೆ ಇವರುಗಳ ದುರ್ವರ್ತನೆಯ ಕುರಿತು ಇಲಾಖಾ ವಿಚಾರಣೆ ನಡೆಸಲು ಉಪ ಲೋಕಾಯುಕ್ತರು–2ರವರಿಗೆ ವಹಿಸುವ ಕುರಿತು.

**ಓದಲಾಗಿದೆ:** ಅಪರ ನಿಬಂಧಕರು ವಿಚಾರಣೆಗಳು–2 (ಪ್ರಭಾರ) ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ಇವರ ಅ.ಸ.ಪ ಸಂಖ್ಯೆ: ಕಂಪ್ಲೇಂಟ್/ಲೋಕ್/ಬಿಡಿ–1427/2014/ಎಆರ್‌ಎಲ್‌ಒ–2, ದಿನಾಂಕ: 25.04.2015.

**ಪ್ರಸ್ತಾವನೆ:**

ಶ್ರೀ ನರಸೇಗೌಡ, ಕ್ಯಾಷಿಯರ್, ಕಿಂಗ್ಸ್ ಕಾಟೇಜ್ ಬಾರ್ ಅಂಡ್ ರೆಸ್ಟೋರೆಂಟ್, ಸತ್ಯಮಂಗಲ, ತುಮಕೂರು ಜಿಲ್ಲೆ, ಇವರು ದಿನಾಂಕ: 30/06/2011 ರಂದು ಲೋಕಾಯುಕ್ತ ಠಾಣೆಗೆ ಹಾಜರಾಗಿ ತಮ್ಮ ಬಾರ್‌ಗೆ ಸಂಬಂಧಿಸಿದ ಪ್ರಕರಣವನ್ನು ಮುಕ್ತಾಯ ಮಾಡಲು ಶ್ರೀ ಅರವಿಂದ ಎಸ್ ಮಂಗಾಣಿ, ಅಬಕಾರಿ ಉಪ ಆಯುಕ್ತರು, ಲಂಚದ ಹಣವನ್ನು ಕೋರಿದ್ದು, ಮುಂಗಡವಾಗಿ ₹. 40,000ಗಳನ್ನು ದಿನಾಂಕ: 30/06/2011ರಂದು ತಲುಪಿಸಿದ್ದು, ಉಳಿದ ₹. 50,000 ಗಳನ್ನು ತಂದು ಕೊಡಲು ಒತ್ತಾಯ ಮಾಡಿರುವುದಾಗಿ ದೂರು ನೀಡಿರುತ್ತಾರೆ. ತುಮಕೂರು ಜಿಲ್ಲಾ ಲೋಕಾಯುಕ್ತ ಪೊಲೀಸರು ಮೊಕದ್ದಮೆ ಸಂಖ್ಯೆ: 08/2011ನ್ನು ದಾಖಲಿಸಿಕೊಂಡು ಪ್ರಕರಣದ ತನಿಖೆ ನಡೆಸಿರುತ್ತಾರೆ. ₹. 40,000 ಮೊತ್ತವನ್ನು ಶ್ರೀ ಮಂಗಾಣಿಯವರ ಸೂಚನೆಯಂತೆ ಶ್ರೀ ಲಿಂಗರಾಜುರವರು ಶ್ರೀ ಚೇತನ್‌ರವರ ಮೂಲಕ ಪಡೆದುಕೊಂಡಿದ್ದು, ಅದೇ ದಿನದಂದು ಸದರಿ ಮೊತ್ತವನ್ನು ಎಫ್.ಡಿ.ಎ.ಆಗಿ ಕೆಲಸ ಮಾಡುತ್ತಿರುವ ಶ್ರೀ ಸಂಗನಬಸಪ್ಪನವರಿಂದ ಹಾಗೂ ಸನ್ನದುದಾರರಾದ ಶ್ರೀ ಜಗದೀಶ್‌ರವರ ಮೂಲಕ ಶ್ರೀ ಮಂಗಾಣಿಯವರಿಗೆ ತಲುಪಿಸಿರುವುದು ಲೋಕಾಯುಕ್ತ ತನಿಖೆಯಲ್ಲಿ ತಿಳಿದು ಬಂದಿದೆ. ಆರೋಪಿಗಳಾದ ಶ್ರೀ ಲಿಂಗರಾಜು, ಶ್ರೀ ಚೇತನ್ ಮತ್ತು ಶ್ರೀ ಸಂಗನಬಸಪ್ಪನವರು ವಿಚಾರಣೆ ವೇಳೆಯಲ್ಲಿ ಲಿಖಿತ ಸಮಜಾಯಿಷಿ ನೀಡಿ ದೂರುದಾರರಿಂದ ₹. 40,000 ಲಂಚದ ಹಣ ಪಡೆದು ಅಂಶವನ್ನು ಒಪ್ಪಿಕೊಂಡಿರುತ್ತಾರೆ. ಆದರೆ ಸದರಿ ಲಂಚದ ಹಣವನ್ನು ಪಡೆದಿರುವ ಬಗ್ಗೆ ಶ್ರೀ ಮಂಗಾಣಿಯವರು ನಿರಾಕರಿಸಿದ್ದರಿಂದ, ಲಂಚದ ಹಣ ಪತ್ತೆ ಮಾಡಲು ಅವರು ವಾಸವಾಗಿದ್ದ ತುಮಕೂರು ನಗರದ ವಿಘ್ನೇಶ್ವರ ಕಂಫರ್ಟ್ಸ್ ಲಾಡ್ಜ್ ರೂಮಿನ ಶೋಧನೆ ಮಾಡಿದ್ದು, ಲಂಚದ ಹಣ ಸಿಕ್ಕಿರುವುದಿಲ್ಲ. ಆದರೆ ರೂಮಿನಲ್ಲಿ ಏಳು ಮದ್ಯದ ಬಾಟಲಿಗಳನ್ನು ಅಮಾನತ್ತು ಪಡಿಸಿಕೊಂಡಿರುತ್ತಾರೆ. ವಶಪಡಿಸಿಕೊಂಡ ಮದ್ಯದ ಬಾಟಲ್‌ಗಳ ಕುರಿತು ತನಿಖೆ ಕೈಗೊಳ್ಳಲು ಸೂಚಿಸಿದ್ದರ ಮೇರೆಗೆ ಪೊಲೀಸ್ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ ತುಮಕೂರು, ಇವರು ದಿನಾಂಕ: 22/9/2011 ರಂದು ವರದಿ ಸಲ್ಲಿಸಿದ್ದು, ಶ್ರೀ ಮಂಗಾಣಿಯವರಿಗೆ ಅವರ ಅಧೀನ ಅಧಿಕಾರಿಯಾದ ಶ್ರೀ ಎಸ್.ಕೃಷ್ಣ ಅಬಕಾರಿ ನಿರೀಕ್ಷಕರು, ಗುಬ್ಬಿ ವಲಯ, ಇವರು 4 ಮದ್ಯದ ಬಾಟಲ್‌ಗಳನ್ನು ಮತ್ತು ಸನ್ನದುದಾರರಿಂದ 3 ಬಾಟಲ್‌ಗಳನ್ನು ಪಡೆದಿರುತ್ತಾರೆಂದು ವರದಿಸಿರುತ್ತಾರೆ. ದಿನಾಂಕ:1/7/2011 ರಂದು ತುಮಕೂರು ಅಬಕಾರಿ ಕಛೇರಿಯ ಆವರಣದಲ್ಲಿ ನಿಂತಿದ್ದ ಅಬಕಾರಿ ಇಲಾಖೆಯ ಕೆಎ 06 ಜಿ 439 ಟಾಟಾ ಸುಮೊ ವಾಹನದಲ್ಲಿ ಅಬಕಾರಿ ಉಪ ಆಯುಕ್ತರ ಪರವಾಗಿ ಶ್ರೀ ಲಿಂಗರಾಜುರವರ ಸೂಚನೆ ಮೇರೆಗೆ ಶ್ರೀ ಟಿ.ಪಿ.ಚೇತನ್, ಗುತ್ತಿಗೆ ವಾಹನ ಚಾಲಕ, ಇವರು ಶ್ರೀ ನರಸೇಗೌಡ, ಕ್ಯಾಷಿಯರ್, ಕಿಂಗ್ಸ್ ಕಾಟೇಜ್ ಬಾರ್ ಅಂಡ್ ರೆಸ್ಟೋರೆಂಟ್, ಇವರಿಂದ ₹. 50,000 ಲಂಚದ ಹಣ ಸ್ವೀಕರಿಸುತ್ತಿರುವಾಗ ಲೋಕಾಯುಕ್ತ ಪೊಲೀಸರ ಬಲೆಗೆ ಸಿಕ್ಕಿ ಬಿದ್ದಿರುತ್ತಾರೆ. ಶ್ರೀ ಚೇತನ್ ರವರ ಎರಡೂ ಕೈ ಬೆರಳುಗಳನ್ನು ತೊಳೆಸಿದ ದ್ರಾವಣ ತಿಳಿ ಗುಲಾಬಿ ಬಣ್ಣಕ್ಕೆ ಬದಲಾಗಿದ್ದು, ಆರೋಪಿತರು ಲಂಚದ ಹಣ ಸ್ವೀಕರಿಸಿರುವುದು ದೃಢಪಟ್ಟಿರುತ್ತದೆ. ದೂರುದಾರರಾದ ಶ್ರೀ ನರಸೇಗೌಡರವರನ್ನು ದಿ: 30/06/2011 ರಂದು ಡಿಜಿಟಲ್ ವಾಯ್ಸ್ ರೆಕಾರ್ಡರ್‌ನಲ್ಲಿ ಲಂಚದ ಹಣ ನೀಡಲು ಒತ್ತಾಯ ಮಾಡಿರುವ ಸಂಭಾಷಣೆಯನ್ನು ರೆಕಾರ್ಡ್ ಮಾಡಿದ್ದು, ₹. 40,000 ಮುಂಗಡ ಕೊಟ್ಟಿರುವುದು ದಾಖಲಾಗಿರುತ್ತದೆ. ಶ್ರೀಮತಿ ಗೀತ, ಅಬಕಾರಿ ಅಧೀಕ್ಷಕರು, ತುಮಕೂರುರವರು ಶ್ರೀ ಹೆಚ್.ಬಿ. ಲಿಂಗರಾಜುರವರ ಧ್ವನಿಯನ್ನು ಗುರುತಿಸಿರುತ್ತಾರೆ.

ಮೇಲೆ ಓದಲಾದ ದಿನಾಂಕ: 25.04.2015ರ ಪತ್ರದೊಂದಿಗೆ 1) ಶ್ರೀ ಎ.ಎಸ್.ಮಂಗಾಣಿ, ಅಂದಿನ ಅಬಕಾರಿ ಉಪ ಆಯುಕ್ತರು (ಪ್ರಸ್ತುತ ನಿವೃತ್ತ), 2) ಶ್ರೀ ಲಿಂಗರಾಜು, ಅಬಕಾರಿ ಉಪ ನಿರೀಕ್ಷಕರು, 3) ಶ್ರೀ ಕೃಷ್ಣ ಅಬಕಾರಿ ನಿರೀಕ್ಷಕರು, (ಪ್ರಸ್ತುತ ನಿವೃತ್ತ), ಗುಬ್ಬಿ ವಲಯ, ತುಮಕೂರು ಜಿಲ್ಲೆ ಇವರುಗಳು ಕರ್ನಾಟಕ ನಾಗರಿಕ ಸೇವಾ (ನಡತೆ) ನಿಯಮಗಳು 1966ರ ನಿಯಮ– 3(i)(ii)(iii) ರಂತೆ ದುರ್ನಡತೆಯೆಸಗಿದ್ದು, ಶಿಸ್ತು ಕ್ರಮಕ್ಕೆ ಬಾಧ್ಯರಾಗಿರುವುದರಿಂದ ಕರ್ನಾಟಕ ಲೋಕಾಯುಕ್ತ ಕಾಯ್ದೆ, 1984ರ ಕಲಂ 12(3)ರನ್ವಯ ಕರ್ನಾಟಕ ನಾಗರಿಕ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ–14–ಎ ರನ್ವಯ ಇಲಾಖಾ ವಿಚಾರಣೆಗೆ ತಮಗೆ ವಹಿಸುವಂತೆ ಪ್ರಭಾರಿ ಉಪ ನಿಬಂಧಕರು, ವಿಚಾರಣೆಗಳು–2 ಅವರು ಶಿಫಾರಸ್ಸು ಮಾಡಿದ್ದಾರೆ.

ಸರ್ಕಾರವು ಮಾನ್ಯ ಉಪ ನಿಬಂಧಕರು, ವಿಚಾರಣೆಗಳು-2 ರವರ ವರದಿಯನ್ನು ನಿಯಮಾನುಸಾರ ಪರಿಶೀಲಿಸಿ ಮೂವರು ಆರೋಪಿತರ ವಿರುದ್ಧದ ಆರೋಪವು ಮೇಲ್ನೋಟಕ್ಕೆ ಸಾಬೀತಾಗಿರುವುದಾಗಿ ಕಂಡು ಬಂದಿರುವುದರಿಂದ ಹಾಗೂ ದುಷ್ಕೃತ್ಯ ಎಸಗಿರುವುದಾಗಿ ಕಂಡು ಬಂದಿರುವುದರಿಂದ ಇದರ ಬಗ್ಗೆ ಪೂರ್ಣ ಪ್ರಮಾಣದ ಇಲಾಖಾ ವಿಚಾರಣೆ ನಡೆಸಲು 1ನೇ ಆರೋಪಿ, ಶ್ರೀ ಎ.ಎಸ್.ಮಂಗಾಣಿ ಅಂದಿನ ಅಬಕಾರಿ ಉಪ ಆಯುಕ್ತರು ಪ್ರಸ್ತುತ ನಿವೃತ್ತ, ಮತ್ತು 3ನೇ ಆರೋಪಿ, ಶ್ರೀ ಕೃಷ್ಣ ಅಂದಿನ ಅಬಕಾರಿ ನಿರೀಕ್ಷಕರು, (ಪ್ರಸ್ತುತ ನಿವೃತ್ತ), ಗುಬ್ಬಿ ವಲಯ, ತುಮಕೂರು ಜಿಲ್ಲೆ ಇವರು ಸರ್ಕಾರಿ ಸೇವೆಯಿಂದ ವಯೋ ನಿವೃತ್ತಿ ಹೊಂದಿರುವುದರಿಂದ, ಕರ್ನಾಟಕ ನಾಗರೀಕ ಸೇವೆ ಸೇವಾ ನಿಯಮಾವಳಿಯ ನಿಯಮ 214(2)(ಬಿ)(i) ರನ್ವಯ ಮತ್ತು ಶ್ರೀ ಲಿಂಗರಾಜು ಅಂದಿನ ಅಬಕಾರಿ ಉಪ ನಿರೀಕ್ಷಕ ತುಮಕೂರು ಜಿಲ್ಲೆ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11ರ ಮೇರೆಗೆ ಪೂರ್ಣ ಪ್ರಮಾಣದ ಇಲಾಖಾ ವಿಚಾರಣೆಯನ್ನು ನಡೆಸಲು ಸದರಿ ನಿಯಮಾವಳಿಯ ನಿಯಮ 14-ಎ ರನ್ವಯ ಸದರಿ ಪ್ರಕರಣವನ್ನು ಉಪ ಲೋಕಾಯುಕ್ತರು-2, ಇವರಿಗೆ ವಹಿಸಲು ತೀರ್ಮಾನಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 87 ಇಪಿಎಸ್ 2011, ಬೆಂಗಳೂರು, ದಿನಾಂಕ: 3ನೇ ಸೆಪ್ಟೆಂಬರ್, 2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರವು, ಪ್ರಕರಣದ 1ನೇ ಆರೋಪಿ, ಶ್ರೀ ಎ.ಎಸ್.ಮಂಗಾಣಿ ಅಂದಿನ ಅಬಕಾರಿ ಉಪ ಆಯುಕ್ತರು ಪ್ರಸ್ತುತ ನಿವೃತ್ತ, ಮತ್ತು 3ನೇ ಆರೋಪಿ ಶ್ರೀ ಕೃಷ್ಣ, ಅಂದಿನ ಅಬಕಾರಿ ನಿರೀಕ್ಷಕರು, (ಪ್ರಸ್ತುತ ನಿವೃತ್ತ), ಗುಬ್ಬಿ ವಲಯ, ತುಮಕೂರು ಜಿಲ್ಲೆ, ಇವರು ಸರ್ಕಾರಿ ಸೇವೆಯಿಂದ ವಯೋ ನಿವೃತ್ತಿ ಹೊಂದಿರುವುದರಿಂದ, ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಯ ನಿಯಮ 214(2)(ಬಿ)(i) ರನ್ವಯ ಮತ್ತು ಶ್ರೀ ಲಿಂಗರಾಜು, ಅಂದಿನ ಅಬಕಾರಿ ಉಪ ನಿರೀಕ್ಷಕ, ತುಮಕೂರು ಜಿಲ್ಲೆ ಇವರ ವಿರುದ್ಧ ಕರ್ನಾಟಕ ನಾಗರಿಕ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ11ರ ಮೇರೆಗೆ ಪೂರ್ಣ ಪ್ರಮಾಣದ ಇಲಾಖಾ ವಿಚಾರಣೆಯನ್ನು ನಡೆಸಲು ಸದರಿ ನಿಯಮಾವಳಿಯ ನಿಯಮ 14-ಎ ರನ್ವಯ ಸದರಿ ಪ್ರಕರಣವನ್ನು ಉಪ ಲೋಕಾಯುಕ್ತರು-2, ಇವರಿಗೆ ವಹಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವೆಂಕಟೇಶ್. ಜಿ.,**

ಸರ್ಕಾರದ ಅಧೀನ ಕಾರ್ಯದರ್ಶಿ,

PR. 672 ಆರ್ಥಿಕ ಇಲಾಖೆ (ಅಬಕಾರಿ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಸುತ್ತೋಲೆ

**ಸಂಖ್ಯೆ: ಸಿಆಸುಇ 57 ರಾರಾಆ 2015, ಬೆಂಗಳೂರು, ದಿನಾಂಕ: 16.07.2015.**

**ವಿಷಯ:** ಸಂಸತ್ ಸದಸ್ಯರ ಹಾಗೂ ರಾಜ್ಯ ವಿಧಾನ ಮಂಡಲದ ಸದಸ್ಯರಿಂದ ಬಂದಂತಹ ದೂರವಾಣಿ ಕರೆಗಳನ್ನು ಹಿಂತಿರುಗಿಸುವ ಬಗ್ಗೆ.

**ಉಲ್ಲೇಖ:** ಸುತ್ತೋಲೆ ಸಂಖ್ಯೆ: ಸಿಆಸುಇ 13 ರಾರಾಆ 99, ದಿನಾಂಕ: 27.04.2000.

ವಿಧಾನ ಮಂಡಲದ ಸದಸ್ಯರುಗಳ ದೂರವಾಣಿ ಕರೆಗಳಿಗೆ ಸರ್ಕಾರದ ಅಧಿಕಾರಿಗಳು ಸ್ಪಂದಿಸುತ್ತಿಲ್ಲವೆಂಬ ವಿಷಯವನ್ನು ಸರ್ಕಾರದ ಗಮನಕ್ಕೆ ತಂದಿದ್ದು, ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಾರ್ಯದರ್ಶಿಗಳು ಹಾಗೂ ಇಲಾಖಾ ಮುಖ್ಯಸ್ಥರುಗಳು ಸಭೆಯಲ್ಲಿದ್ದಾಗ, ಅವರ ಆಪ್ತ ಕಾರ್ಯದರ್ಶಿಗಳು/ಆಪ್ತ ಸಹಾಯಕರುಗಳು, ಅವರುಗಳಿಗೆ ಬಂದಂತಹ ದೂರವಾಣಿ ಕರೆಗಳನ್ನು ಪಟ್ಟಿ ಮಾಡುವುದಲ್ಲದೆ, ಅವರುಗಳು ಹಿಂತಿರುಗಿ ಬಂದ ನಂತರ ಅವರಿಗೆ ಅದನ್ನು ತೋರಿಸಲು ಕ್ರಮ ತೆಗೆದುಕೊಳ್ಳುವಂತೆ ಸೂಚಿಸಲಾಗಿದೆ. ಸಚಿವರುಗಳು, ಸಂಸತ್ ಸದಸ್ಯರುಗಳು, ಶಾಸಕರುಗಳು, ಅತಿ ಗಣ್ಯ ವ್ಯಕ್ತಿಗಳು ಮತ್ತು ಹಿರಿಯ ಅಧಿಕಾರಿಗಳಿಂದ ಬಂದಂತಹ ದೂರವಾಣಿ ಕರೆಗಳನ್ನು ಕಡ್ಡಾಯವಾಗಿ ಹಿಂತಿರುಗಿಸುವಂತೆ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು ಹಾಗೂ ಇಲಾಖಾ ಮುಖ್ಯಸ್ಥರುಗಳಿಗೆ ಉಲ್ಲೇಖಿತ ಸುತ್ತೋಲೆಯಲ್ಲಿ ಸರ್ಕಾರವು ಸೂಚನೆಯನ್ನು ನೀಡಿರುತ್ತದೆ.

ಮುಂದುವರೆದು, ಜಿಲ್ಲಾಧಿಕಾರಿಗಳು, ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ತಾಲ್ಲೂಕು ಪಂಚಾಯತ್‌ನ ಕಾರ್ಯನಿರ್ವಹಣಾಧಿಕಾರಿಗಳು, ಹಾಗೂ ಇತರೆ ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಅಧಿಕಾರಿಗಳು ಸಹ ಸರ್ಕಾರದ ಈ ಸೂಚನೆಯನ್ನು ಇನ್ನು ಮುಂದೆ ಕಟ್ಟುನಿಟ್ಟಾಗಿ ಪಾಲಿಸುವಂತೆ ಸೂಚಿಸಲಾಗಿದೆ.

**ಭೀಮಾಶಂಕರ ರಾಸೂರ್**

PR. 669 ಸರ್ಕಾರದ ಅಧೀನ ಕಾರ್ಯದರ್ಶಿ,

SC. 100 ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ. (ರಾಜಕೀಯ)

## ಕರ್ನಾಟಕ ಸರ್ಕಾರದ ಸಚಿವಾಲಯ

### ಸುತ್ತೋಲೆ

**ಸಂ: ಸಿಆಸುಇ 54 ರಾರಾಆ 2015, ಬೆಂಗಳೂರು, ದಿನಾಂಕ: 27.06.2015.**

**ವಿಷಯ:** ಮಾನ್ಯ ಮುಖ್ಯಮಂತ್ರಿಯವರ ಪ್ರವಾಸ ಸಮಯದಲ್ಲಿ ಅಧಿಕಾರಿಗಳು ಶಿಷ್ಟಾಚಾರವನ್ನು ಪಾಲಿಸುವ ಬಗ್ಗೆ.

**ಉಲ್ಲೇಖ:** 1. ದಿನಾಂಕ: 18.05.1982 ಸುತ್ತೋಲೆ ಸಂಖ್ಯೆ: ಸಿಆಸುಇ 85 ಎಎಆರ್ 82

2. ದಿನಾಂಕ: 18.05.1982 ಸುತ್ತೋಲೆ ಸಂಖ್ಯೆ: ಸಿಆಸುಇ 55 ಎಎಆರ್ 85

3. ದಿನಾಂಕ: 25.11.1992 ಸುತ್ತೋಲೆ ಸಂಖ್ಯೆ: ಸಿಆಸುಇ 73 ಜಿಎಂ 95

4. ದಿನಾಂಕ: 17.03.1997 ಸುತ್ತೋಲೆ ಸಂಖ್ಯೆ: ಸಿಆಸುಇ 16 ರಾರಾಆ 97

5. ದಿನಾಂಕ: 28.04.2000 ಸುತ್ತೋಲೆ ಸಂಖ್ಯೆ: ಸಿಆಸುಇ 46 ರಾರಾಆ 99

ಮೇಲಿನ ಉಲ್ಲೇಖ(1)ರ ಸರ್ಕಾರದ ಸುತ್ತೋಲೆಯಲ್ಲಿನ ಕಂಡಿಕೆ–2ರಲ್ಲಿ ಮಾನ್ಯ ಮುಖ್ಯಮಂತ್ರಿಗಳು ತಮ್ಮ ಪ್ರವಾಸದ ಸಮಯದಲ್ಲಿ ಯಾವುದೇ ಜಿಲ್ಲೆಯ ಮೂಲಕ ಹಾದುಹೋದಲ್ಲಿ ಜಿಲ್ಲೆಯ ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳು ಅವರನ್ನು ತಮ್ಮ ಗಡಿಯಲ್ಲಿ ಭೇಟಿ ಮಾಡುವುದಲ್ಲದೆ ಜಿಲ್ಲೆಗೆ ಸಂಬಂಧಿಸಿದ ಇತ್ತೀಚಿನ ಮಾಹಿತಿಗಳನ್ನು ಅವರಿಗೆ ಒದಗಿಸಬೇಕೆಂದು ಸೂಚಿಸಲಾಗಿತ್ತು. ಸಂಬಂಧಿಸಿದ ಎಲ್ಲಾ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಹಣಾಧಿಕಾರಿಯವರು ಸಹ ಭೇಟಿ ಮಾಡಿ ಜಿಲ್ಲೆಗೆ ಸಂಬಂಧಿಸಿದ ಎಲ್ಲಾ ಮಾಹಿತಿಗಳನ್ನು ನೀಡುವ ಅವಶ್ಯಕತೆ ಇರುತ್ತದೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಈ ತಕ್ಷಣದಿಂದ ಜಾರಿಗೆ ಬರುವಂತೆ, ಮಾನ್ಯ ಮುಖ್ಯಮಂತ್ರಿಯವರು ತಮ್ಮ ಪ್ರವಾಸದ ಸಮಯದಲ್ಲಿ ಯಾವುದೇ ಜಿಲ್ಲೆಯ ಮೂಲಕ ಹಾದುಹೋದಲ್ಲಿ ಅಥವಾ ಪ್ರವಾಸ ಮಾಡಿದಲ್ಲಿ ಜಿಲ್ಲಾಧಿಕಾರಿಗಳು, ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಮತ್ತು ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳು ತಮ್ಮ ಜಿಲ್ಲೆಗಳ ಗಡಿಗಳಲ್ಲಿ ಭೇಟಿ ಮಾಡಿ/ಬರಮಾಡಿಕೊಂಡು ತಮ್ಮ ಜಿಲ್ಲೆಗೆ ಸಂಬಂಧಿಸಿದ ಇತ್ತೀಚಿನ ಮಾಹಿತಿಗಳನ್ನು ನೀಡತಕ್ಕದ್ದೆಂದು ಈ ಮೂಲಕ ಸೂಚಿಸಿದೆ.

**PR. 668** **ಕೌಶಿಕ್ ಮುಖರ್ಜಿ**

**SC. 100** ಸರ್ಕಾರದ ಮುಖ್ಯ ಕಾರ್ಯದರ್ಶಿ.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀ ಎಲ್.ಶಿವಶಂಕರ್, ವಾಹನ ಚಾಲಕರು, ರಾಜರಾಜೇಶ್ವರಿನಗರ ವಲಯ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಇಲ್ಲಿ ಕರ್ತವ್ಯನಿರ್ವಹಿಸುತ್ತಿರುವ ಇವರನ್ನು ವಿಲೀನಗೊಳಿಸುವ ಬಗ್ಗೆ.

**ಓದಲಾಗಿದೆ:**

1. ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರ ಅಧಿಕೃತ ಜ್ಞಾಪನಾ ಸಂಖ್ಯೆ: ವಿಜಿ/ನಸ/ಸಿಆರ್/18/14–15, ದಿನಾಂಕ: 17–09–2014.
2. ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಇವರ ಪತ್ರ ಸಂಖ್ಯೆ: ಬಿ12(1)/ ಪಿಆರ್/ 461/2012–13, ದಿನಾಂಕ: 22–01–2015.
3. ಸರ್ಕಾರದ ಪತ್ರ ಸಂಖ್ಯೆ: ನಅಇ 142 ಎಂಎನ್‌ವೈ 2015, ದಿನಾಂಕ: 20–05–2015.
4. ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ: 11636 ಡಿಎಂಎ 21 ಡಿಡಬ್ಲ್ಯೂಇ 2015–16, ದಿನಾಂಕ: 30–07–2015.

**ಪ್ರಸ್ತಾವನೆ:**

ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರು ಮೇಲೆ (1) ರಲ್ಲಿ ಓದಲಾದ ದಿನಾಂಕ: 17–09–2014 ರ ಅಧಿಕೃತ ಜ್ಞಾಪನದಲ್ಲಿ ಶ್ರೀ ಎಲ್.ಶಿವಶಂಕರ್, ವಾಹನ ಚಾಲಕರು, ರಾಜರಾಜೇಶ್ವರಿ ನಗರ ಸಭೆ ಇವರ ಸೇವೆಯನ್ನು ದಿನಾಂಕ: 10–03–2005 ರಿಂದ ಅನ್ವಯವಾಗುವಂತೆ ವಾಹನ ಚಾಲಕರ ಹುದ್ದೆಯಲ್ಲಿ ವೇತನ ಶ್ರೇಣಿ ರೂ.11600–21000 ರಲ್ಲಿ ಸಕ್ರಮಗೊಳಿಸಿ ಆದೇಶಿಸಿರುತ್ತಾರೆ.

2. ಮೇಲೆ (2) ರಲ್ಲಿ ಓದಲಾದ ದಿನಾಂಕ: 22–01–2015ರ ಪತ್ರದಲ್ಲಿ, ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಇವರು ಜಿಲ್ಲಾಧಿಕಾರಿ, ಬೆಂಗಳೂರು ನಗರ ಜಿಲ್ಲೆ ಇವರು ಅಧಿಕೃತ ಜ್ಞಾಪನ ಸಂಖ್ಯೆ: ವಿಜಿ.ನಸ/ಸಿಆರ್/18/2014–15, ದಿನಾಂಕ: 17–09–2014 ರಲ್ಲಿ ಶ್ರೀ ಎಲ್.ಶಿವಶಂಕರ್, ವಾಹನ ಚಾಲಕರು ರಾಜರಾಜೇಶ್ವರಿನಗರ ನಗರಸಭೆ ಇವರ ಸೇವೆಯನ್ನು ದಿನಾಂಕ: 10–03–2005 ರಿಂದ ಅನ್ವಯವಾಗುವಂತೆ ವಾಹನ ಚಾಲಕರ ಹುದ್ದೆಯಲ್ಲಿ ವೇತನ ಶ್ರೇಣಿ ರೂ.11,600–21,000/–ರಲ್ಲಿ ಸಕ್ರಮಗೊಳಿಸಿ ಆದೇಶ ಹೊರಡಿಸಿದ್ದು, ಅದರಂತೆ ಸದರಿ ನೌಕರರು ಅವರ ಸೇವೆಯನ್ನು ಬಿ.ಬಿ.ಎಂ.ಪಿ.ಯಲ್ಲಿ ವಿಲೀನಗೊಳಿಸಲು ಹಾಗೂ ಸಕ್ರಮಗೊಳಿಸಿದ ದಿನಾಂಕದಿಂದ ಅನ್ವಯವಾಗುವಂತೆ ವೇತನ ಮತ್ತು ಭತ್ಯೆಗಳನ್ನು ಬಿ.ಬಿ.ಎಂ.ಪಿ.ಯಿಂದಲೇ ಪಾವತಿಸಲು ಮನವಿ ಸಲ್ಲಿಸಿರುತ್ತಾರೆ. ಶ್ರೀ ಎಲ್.ಶಿವಶಂಕರ್, ವಾಹನ ಚಾಲಕರು ಅವರ ಸೇವೆಯನ್ನು ಪಾಲಿಕೆಯ ಸೇವೆಯಲ್ಲಿ ವಿಲೀನಗೊಳಿಸಲು ಪಾಲಿಕೆ ವತಿಯಿಂದ ಅವಕಾಶ ಇರುವುದಿಲ್ಲ. ಆದುದರಿಂದ ಸರ್ಕಾರದ ಹಂತದಲ್ಲಿ ಕ್ರಮವಹಿಸುವಂತೆ ಪ್ರಶ್ನಿಸಿರುತ್ತಾರೆ.

3. ಮೇಲೆ (3) ರಲ್ಲಿ ಓದಲಾದ ದಿನಾಂಕ: 20–05–2015 ರ ಪತ್ರದಲ್ಲಿ, ಶ್ರೀ ಎಲ್.ಶಿವಶಂಕರ್, ವಾಹನ ಚಾಲಕರು ಇವರ ಸೇವೆಯನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಸೇವೆಯಲ್ಲಿ ವಿಲೀನಗೊಲಿಸುವ ಬಗ್ಗೆ ಅಭಿಪ್ರಾಯವನ್ನು ನೀಡುವಂತೆ ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ಇವರನ್ನು ಕೋರಲಾಗಿತ್ತು.

4. ಈ ಬಗ್ಗೆ ಮೇಲೆ (4) ರಲ್ಲಿ ಓದಲಾದ ದಿನಾಂಕ: 30–07–2015 ರ ಪತ್ರದಲ್ಲಿ, ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ಇವರು ಶ್ರೀ ಎಲ್.ಶಿವಶಂಕರ್, ವಾಹನ ಚಾಲಕರು ಇವರು ಈ ಹಿಂದೆ ರಾಜರಾಜೇಶ್ವರಿ ನಗರಸಭೆ (ಹಾಲಿ ಬಿ.ಬಿ.ಎಂ.ಪಿ.ಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ಇವರ ಸೇವೆಯನ್ನು ಬೆಂಗಳೂರು ನಗರ ಜಿಲ್ಲಾಧಿಕಾರಿಗಳು ದಿನಾಂಕ: 17–09–2014 ರಂತೆ ಸಕ್ರಮಗೊಳಿಸಿದ್ದು ಹಾಲಿ ಬಿ.ಬಿ.ಎಂ.ಪಿ.ಯಲ್ಲಿ ಕೆಲಸ ನಿರ್ವಹಿಸುತ್ತಿರುತ್ತಾರೆ. ಈಗಾಗಲೇ ನಗರಸಭೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ದಿನಗೂಲಿ ನೌಕರರನ್ನು ಸಕ್ರಮಗೊಳಿಸಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಸೇವೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ನಅಇ 729 ಎಂಎನ್‌ವೈ 2007, ದಿನಾಂಕ: 13–05–2011 ರಂತೆ ಒಟ್ಟು 295 ನೌಕರರುಗಳನ್ನು

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ವಿಲೀನಗೊಳಿಸಿರುವುದರಿಂದ ಅದರಂತೆ, ಶ್ರೀ ಎಲ್.ಶಿವಶಂಕರ್, ವಾಹನ ಚಾಲಕ, ರಾಜರಾಜೇಶ್ವರಿನಗರ ವಲಯ ಕಚೇರಿ, ಬಿ.ಬಿ.ಎಂ.ಪಿ. ಇವರ ಸೇವೆಯನ್ನು ಸಹ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ವಿಲೀನಗೊಳಿಸಬಹುದು ಎಂಬುದಾಗಿ ಸಹಮತ ವ್ಯಕ್ತಪಡಿಸಿರುವುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ನಅಇ 142 ಎಂಎನ್‌ವೈ 2015 ಬೆಂಗಳೂರು, ದಿನಾಂಕ: 23-12-2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ರಾಜರಾಜೇಶ್ವರಿನಗರ ವಲಯ ಕಚೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಪೌರಾಡಳಿತ ಸೇವೆಗೆ ಸೇರಿದ ಶ್ರೀ ಎಲ್.ಶಿವಶಂಕರ್, ವಾಹನ ಚಾಲಕರು ಇವರ ಸೇವೆಯನ್ನು ದಿನಾಂಕ: 16-01-2007 ರಿಂದ ಜಾರಿಗೆ ಬರುವಂತೆ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಸೇವೆಯಲ್ಲಿ ಈ ಕೆಳಕಂಡ ಷರತ್ತುಗೊಳಪಟ್ಟು ವಿಲೀನಗೊಳಿಸಿ ಆದೇಶಿಸಿದೆ.

(1) ವಿಲೀನಗೊಳಿಸಲಾದ ನೌಕರರುಗಳನ್ನು ಅವರು ಹೊಂದಿರುವ ಹುದ್ದೆಗೆ ನೇಮಿಸುವುದು.

(2) ವಿಲೀನಗೊಳಿಸುವ ಪ್ರಕ್ರಿಯೆಯನ್ನು ಮಾನ್ಯ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 8523/2007 ಮತ್ತಿತರೆ ಪ್ರಕರಣಗಳಲ್ಲಿ ನೀಡಿರುವ ಆದೇಶದಂತೆ (i) ಹುದ್ದೆಯ ಸ್ವರೂಪ ಮತ್ತು ಕರ್ತವ್ಯಗಳು, (ii) ಹುದ್ದೆಯನ್ನು ಹೊಂದಿರುವ ಅಧಿಕಾರಿಯು ಚಲಾಯಿಸುವ ಅಧಿಕಾರಗಳು, ಅವರ ಅಧಿಕಾರ ವ್ಯಾಪ್ತಿಯ ಪ್ರದೇಶ ಅಥವಾ ಹೊಂದಿರುವ ಇತರೆ ಪ್ರಭಾರ ಅಥವಾ ನಿರ್ವಹಿಸುವ ಜವಾಬ್ದಾರಿಗಳು, (iii) ಹುದ್ದೆಯ ನೇಮಕಾತಿಗೆ ನಿರ್ಧಿಷ್ಟಪಡಿಸಲಾದ ಕನಿಷ್ಠ ವಿದ್ಯಾರ್ಹತೆ, ಯಾವುದಾದರೂ ಇದ್ದಲ್ಲಿ, ಮತ್ತು (iv) ಹುದ್ದೆಯ ವೇತನ, ಈ ಅಂಶಗಳನ್ನು ಕಡ್ಡಾಯವಾಗಿ ಪರಿಗಣಿಸುವುದು.

(3) ವೇತನ ಮತ್ತು ಭತ್ಯೆಗಳನ್ನು ವಿಲೀನಗೊಳಿಸಿದ ದಿನಾಂಕದಿಂದ ಭವಿಷ್ಯವರ್ತಿಯಾಗಿ ನಿಗಧಿಪಡಿಸುವುದು ಮತ್ತು ಈ ಸಂಬಂಧ ವೆಚ್ಚವನ್ನು ಬಿ.ಬಿ.ಎಂ.ಪಿ. ವತಿಯಿಂದಲೇ ಭರಿಸುವುದು.

(4) ನೌಕರರುಗಳ ಜೇಷ್ಠತೆಯನ್ನು ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತಾ) ನಿಯಮಗಳು, 1957 ರ ನಿಯಮ-6 ರನ್ವಯ ನಿಗಧಿಪಡಿಸತಕದ್ದು.

(5) ವಿಲೀನಗೊಳಿಸಿರುವ ನೌಕರರ ಹೆಸರು, ಹುಟ್ಟಿದ ದಿನಾಂಕ ಮತ್ತು ಪ್ರಸ್ತುತ ಹುದ್ದೆಗೆ ಪಾದರ್ಪಣೆ ಮಾಡಿದ ದಿನಾಂಕವನ್ನು ಅವರುಗಳ ಸೇವಾ ಪುಸ್ತಕದೊಂದಿಗೆ ಮತ್ತೊಮ್ಮೆ ತಾಳೆ ಮಾಡಿ ದೃಢೀಕರಿಸತಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎ.ಹಿದಾಯತ್ತುಲ್ಲ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ (ಬಿ.ಬಿ.ಎಂ.ಪಿ.)

**PR. 16**

**SC. 150**

*ಮುದ್ರಕರು ಹಾಗೂ ಪ್ರಕಾಶಕರು:-* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು-59